

# ತಿಳಿದಿರೋಣ

## ಆಧ್ಯಾತ್ಮ ಸಾಧನೆಗೊಂದು ಹೆಜ್ಜೆ

## ಭಾಗ-೧

ಪ್ರಕಾಶನ : ಶ್ರೀಮಾಧ್ವಗ್ರಂಥ ಪ್ರಕಾಶನ, ಬೆಂಗಳೂರು

# ! ತಿಳಿದಿರೋಣ !

(ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

ಭಾಗ - 1

ಅಂತರಂಗ

ಭಗವಂತನ ಸೃಷ್ಟಿ-ರೂಪ ವಿಶೇಷಗಳು

ವೇದ, ಬ್ರಹ್ಮಸೂತ್ರ, ಪುರಾಣ,
ತತ್ತ್ವ ದರ್ಶನಗಳ - ದರ್ಶನ

ಭಾಗವತ-ಭಾರತಾದಿಗಳಲ್ಲಿಯ ವಿಶೇಷ ಮಾಹಿತಿಗಳು

ತಾರತಮ್ಯ - ತಾತ್ವಿಕ ವಿಚಾರಗಳು

ನಿತ್ಯಾಚಾರ - ಸದಾಚಾರ
ಜ್ಯೋತಿಷ್ಯದ ಮಾಹಿತಿಗಳು

ಕಕ್ಷಾತಾರತಮ್ಯ

ಸಾಲಿಗ್ರಾಮ, ಗೋವು, ದೀಪ,
ನವರತ್ನಗಳು, ತುಳಸಿ, ವಿಳ್ಯೆದೆಲೆಗಳ ವಿಶೇಷ ಮಾಹಿತಿ

ಇತ್ಯಾದಿ ..... ಇತ್ಯಾದಿಗಳ
ಉಪಯುಕ್ತ ಮಾಹಿತಿಗಳ ಸಂಗ್ರಹ ಇದರಲ್ಲಿದೆ.

ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

ಬೆಂಗಳೂರು - 560 026

! ತಿಳಿದಿರೋಣ ! ಭಾಗ - 1 (ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

'ಹರಿದಾಸವಾಹಿನಿ'ಯಲ್ಲಿ ಪ್ರಕಟಿತ (ಏಪ್ರಿಲ್ 2001 ರಿಂದ ಡಿಸೆಂಬರ್ 2011) ತಿಳಿದಿರೋಣ ಶೀರ್ಷಿಕೆಯ ಮಾಹಿತಿಗಳ ಸಂಗ್ರಹ. ಸುಮಾರು 120ಕ್ಕೂ ಹೆಚ್ಚಿನ ವಿಶೇಷ ಮಾಹಿತಿಗಳ ಸಂಕಲನ.

ಸಂಗ್ರಹ ಹಾಗೂ ಸಂಪಾದನೆ :

ಎ.ಬಿ. ಶ್ಯಾಮಾಚಾರ್ಯ, B.Tech, FTC, DBM, DSQC, MA

ಮೊದಲ ಮುದ್ರಣ : 2011 (ವಿಜಯದಶಮಿ) ಪ್ರತಿಗಳು : 2000

ಪುಟಗಳು : 108 + 8

ಬೆಲೆ : ರೂ. 40/-

ಅಕ್ಷರ ಜೋಡಣೆ : ತುಲಸಿ ಇಂಪ್ರೆಷನ್ಸ್

ಮುದ್ರಣ : ಪರಿಮಳ ಮುದ್ರಣಾಲಯ

ಮುಖಪುಟ : ಶ್ರೀನಿಧಿ

ಪ್ರಕಾಶನ :
ಶ್ರೀಮಾಧ್ವಗ್ರಂಥಪ್ರಕಾಶನ
ಬೆಂಗಳೂರು - 560 026.
ಫೋನ್ ನಂ. 080-26754221

ಪುಸ್ತಕಗಳು ಲಭ್ಯ ಸ್ಥಳ
ಎ.ಎಸ್. ವೇಣುಗೋಪಾಲ
36, ಈಶಾವಾಸ್ಯ, 11ನೇ ಅಡ್ಡರಸ್ತೆ
17ನೇ ಮುಖ್ಯರಸ್ತೆ, ಮುನೇಶ್ವರಬ್ಲಾಕ್
ಬೆಂಗಳೂರು-560 026

# ಸಂಪಾದಕನ ಕೆಲ-ಕಿಲ ನುಡಿಗಳು

**'ಹರಿದಾಸವಾಹಿನಿ'** ಹರಿದಾಸಸಾಹಿತ್ಯಕ್ಕೆ ಮೀಸಲಾದ ಮಾಸಪತ್ರಿಕೆ. ದಾಸಸಾಹಿತ್ಯಕ್ಕೆಂದು ಯಾವ ಪತ್ರಿಕೆಯೂ ಇಲ್ಲದ್ದಾಗ ಉದಯಿಸಿತು. ಹನ್ನೊಂದನೆಯ ವರುಷ ಪೂರೈಸುವ ನಿಟ್ಟಿನಲ್ಲಿದೆ. ಸಾವಿರಾರು ಮನೆ-ಮನಗಳಿಗೆ ತಲುಪುತ್ತಿದೆ. ದಾಸಸಾಹಿತ್ಯ ಸೌರಭವನ್ನು ಸಾರುತ್ತ ಸೂಸುತ್ತ ಪಸರಿಸುತ್ತಿದೆ, ಸಾರ್ಥಕತೆಯನ್ನು ಪ್ರಸರಿಸುತ್ತಿದೆ. ಇದಕ್ಕೆ ಕಾರಣ ಪತ್ರಿಕೆಯ ಲೇಖಕರು, ಓದುಗರು, ಅಭಿಮಾನಿಗಳು. ಎಲ್ಲರ ಸಹಕಾರ ಸ್ಮರಣೀಯ – ಅಭಿನಂದನೀಯ.

ಹರಿದಾಸಸಾಹಿತ್ಯದ ವೈವಿಧ್ಯಗಳ ಪ್ರತೀಕವಾಗಿ, ವ್ಯಾಸ-ದಾಸಸಾಹಿತ್ಯ, ಧಾರ್ಮಿಕ, ಸಾಮಾಜಿಕ ವಿಚಾರಧಾರೆಗಳನ್ನೊಳಗೊಂಡು ಪ್ರಕಟವಾಗುತ್ತಿರುವ ಈ ಪತ್ರಿಕೆಯಲ್ಲಿ ಮೊದಲ ಸಂಚಿಕೆಯಿಂದಲೂ **'ತಿಳಿದಿರೋಣ'** ಎಂಬ ಶೀರ್ಷಿಕೆಯ ಬರಹ ಮೂಡಿಬರುತ್ತಿದೆ. ತಿಳಿದ ವಿಷಯ. ಈ ಸಂಗ್ರಹ ಆಕರ್ಷಕವಾಗಿ ಸಂಗ್ರಹಯೋಗ್ಯವೆಂದು ಅನೇಕರಿಂದ ವ್ಯಕ್ತವಾಗಿದೆ. ಇದರಲ್ಲಿ ತತ್ತ್ವಕ್ಕೆ ಸಂಬಂಧಿಸಿದ ಅನೇಕ ಪ್ರಮೇಯವಿಷಯಗಳು, ಐತಿಹಾಸಿಕ, ಪೌರಾಣಿಕ, ದಾಸಸಾಹಿತ್ಯ, ಭವಿಷ್ಯ ಹೀಗೆ ಹಲವಾರು ಉಪಯುಕ್ತ ವಿಷಯಗಳ ಮಾಹಿತಿಯನ್ನು ಸಂಗ್ರಹಿಸಿ ಕೊಡಲಾಗುತ್ತಿದೆ. ಬಹಳಷ್ಟು ವಾಚಕರು ಒಂದೆಡೆ ಪುಸ್ತಕ ರೂಪದಲ್ಲಿ ಬರಲು ಅಪೇಕ್ಷಿಸಿದರು. ಈ ಎಲ್ಲ ಕಾರಣಗಳಿಂದ **'ತಿಳಿದಿರೋಣ ಭಾಗ-1'** ರೂಪದಲ್ಲಿ ಹೊರತರಲಾಗಿದೆ. ವಾಚಕ ಮಹಾಶಯರು ಸ್ವಾಗತಿಸುವರೆಂದು ನಂಬಿದೆ. ಹೀಗೆ ಅನೇಕ ವಿಷಯಗಳ ಮಾಹಿತಿ ಸಂಗ್ರಹ ಅನೇಕ ಪುಸ್ತಕಗಳ ಸಹಕಾರದಿಂದ ಪಡೆದಿರುವೆ. ಸುಮಾರು ನೂರು ಗ್ರಂಥಗಳ ಅವಲೋಕನ ಆಗಿರಬಹುದು. ತಿಳಿಸಿದಲ್ಲಿ ಲೇಖಕರ ಸಂಪಾದಕರ ಪ್ರಕಾಶಕರ ಹೆಸರಿನ ಪಟ್ಟಿಯೇ ಒಂದು ಪುಸ್ತಕವಾಗಬಹುದು. ಈ ಮಹನೀಯರ ಸಹಕಾರವನ್ನು ಅಭಿನಂದಿಸಿ ಧನ್ಯವಾದವನ್ನು ಅರ್ಪಿಸಲು ಮರೆಯೆ. ಇಲ್ಲಿಯ ಸಂಗ್ರಹ ಒಂದು ಮಾದರಿ ಮಾತ್ರವಾಗಿ, ಮುಂದಿನ ಭಾಗಗಳಿಗೆ ಪೂರಕವೆಂದು ಭಾವಿಸುವೆ.

ಭಾರತೀಯ ತತ್ತ್ವಶಾಸ್ತ್ರ ಪ್ರಮೇಯಗಳ ಸಾಗರ. ಇದರಲ್ಲಿ ಅಡಗಿರುವ ರತ್ನಗಳೂ ಅನಂತ. ಮೊದಲಬಾರಿಗೆ ಇಂತಹ ರತ್ನಗಳನ್ನೂ ತೆಗೆದು ಜಗತ್ತಿಗೆ ಪರಿಚಯಿಸಿದವರು ಶ್ರೀ ಮದಾನಂದತೀರ್ಥರು. ಅವರು ಪ್ರತಿಪಾದಿಸಿದ ತತ್ತ್ವವಾದವೂ ಇದಾಗಿದೆ. ಅವರ ಸರ್ವಮೂಲ ಸರ್ವಕ್ಕೂ ಮೂಲವೆಂದೆನಿಸಿದೆ. ವೇದ ಇತಿಹಾಸ ಪುರಾಣಗಳನ್ನು ಮಥಿಸಿ ಅದರಲ್ಲಿಯ ಪ್ರಮೇಯಗಳನ್ನು (ಯಾಥಾರ್ಥಜ್ಞಾನ ವಿಷಯ) ಸಂಗ್ರಹಿಸಿ ಕೊಟ್ಟರು. ಇವುಗಳ ಭಾಷಾನುವಾದ

ರೂಪವಾಗಿ ರೂಪಗೊಂಡದ್ದು ಹರಿದಾಸಸಾಹಿತ್ಯ. ಇಲ್ಲಿ ಶ್ರೀ ಸಾಮಾನ್ಯರೂ ತಿಳಿಯುವಂತೆ ಹರಿದಾಸರು ತಮ್ಮ ಅನುಭವಗಳನ್ನೂ ಸಂಯೋಜಿಸಿ ಪದ್ಯರೂಪದಲ್ಲಿ ಕೃತಿಗಳನ್ನು ರಚಿಸಿ ಕೊಟ್ಟರು. ನಿಜಕ್ಕೂ ಪುಣ್ಯಾತ್ಮರು. ಸವಿಯುತ್ತಿರುವ ನಾವು ಧನ್ಯಾತ್ಮರು. ಒಂದರ್ಥದಲ್ಲಿ ಹರಿದಾಸಸಾಹಿತ್ಯ ಪ್ರಮೇಯಗಳ ಸಂಗ್ರಹ ರೂಪದ ಯಥಾರ್ಥಜ್ಞಾನದ ಪ್ರತಿರೂಪ. ಹರಿದಾಸರು ನಿರೂಪಿಸಿದ ಅನೇಕ ಪ್ರಮೇಯಗಳ ಸಂಗ್ರಹವೂ ಇಲ್ಲಿದೆ. ಇತರ ಉಪಯುಕ್ತ ಮಾಹಿತಿಗಳ ಸಂಗ್ರಹವೂ ಅಡಗಿದೆ. ಸಹೃದಯಿಗಳು ಆಸ್ವಾದಿಸಿ ಹರಸುವರೆಂಬ ನಂಬಿಕೆಯೂ ಇದೆ. ಈ ಪುಸ್ತಕ ಒಂದು ಬಗೆಯ ಪ್ರಮೇಯ-ಪ್ರಮಾಣಗಳ ಏಕೀಕರಣದ ಪ್ರಯತ್ನ. ಇದರ ಪ್ರತಿಕ್ರಿಯೆಗೆ ಅನುಗುಣವಾಗಿ ಮುಂದಿನ ಭಾಗಗಳನ್ನು ತರಲು ಪ್ರಯತ್ನಿಸುವೆ.

ಹಿಂದೆ ತಿಳಿಸಿದಂತೆ ಈ ಪುಸ್ತಕ ಆಧ್ಯಾತ್ಮಿಕ ವಿಷಯಗಳ ಸಂಗ್ರಹ. ಯಾರೇ ಸಂಗ್ರಹಿಸಿದರೂ ಇದಕ್ಕೆ ಆಕರ ಶಾಸ್ತ್ರಗಳು, ಪುರಾಣ-ಇತಿಹಾಸ, ಶ್ರುತಿ-ಸ್ಮೃತಿಗಳು, ದಾಸಸಾಹಿತ್ಯದಲ್ಲಿ ಸಂಗ್ರಹಿಸಿಕೊಟ್ಟ ಮಾಹಿತಿಗಳು, ಪರಂಪರೆಯಲ್ಲಿ ಬಂದ ಗುರುಹಿರಿಯರ ಹಿತವಚನಗಳು. ಇವುಗಳ ಅಂತ ಯಾರೂ ಕಾಣರು. ತಿಳಿದಷ್ಟನ್ನು ಅಲ್ಲಿಂದ ಕದ್ದು ಯಥಾಯೋಗ್ಯವಾಗಿ ಸಂಗ್ರಹಿಸಲು ಪ್ರಯತ್ನಿಸಿರುವೆ. ದೋಷಗಳಿದ್ದಲ್ಲಿ ನನ್ನದೆಂಬುದರಲ್ಲಿ ಯಾವ ಸಂಶಯಬೇಡ. ಅಂತಹದಿದ್ದಲ್ಲಿ ತಿಳಿಸಿದಲ್ಲಿ ಕೃತಜ್ಞತೆಯೊಂದಿಗೆ ಸ್ವೀಕರಿಸಿ ತಿದ್ದಿಕೊಳ್ಳುವೆ. ಇದರಂತೆ ಮುಂದಿನ ಭಾಗಗಳನ್ನು ತರುವ ಉದ್ದೇಶವಿದೆ.

ಹರಿದಾಸವಾಹಿನಿ ಪತ್ರಿಕೆಯಲ್ಲಿ ಮೊದಲ ಸಂಚಿಕೆಯಿಂದ ಬಂದ ಈ **'ತಿಳಿದಿರೋಣ'** ವಿಷಯಗಳನ್ನು ಒಂದೆಡೆ ಕೂಡಿಸಿ ಆದಷ್ಟು ವಿಷಯಗಳಿಗನುಗುಣವಾಗಿ ಕೊಡಲಾಗಿದೆ. ಈ ಕಾರ್ಯದಲ್ಲಿ ಸಹಕರಿಸಿ, ಶ್ರಮವಹಿಸಿ ಈ ರೂಪಕ್ಕೆ ತಂದ ಶ್ರೀಮತಿ ದೇವಿಕ ಅವರಿಗೆ, ಸುಂದರವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಪರಿಮಳ ಮುದ್ರಣಾಲಯದ ಶ್ರೀಪ್ರಭಾಕರ್ ಅವರಿಗೆ ಧನ್ಯವಾದಗಳು.

ಸುಜನ ವಿಧೇಯ

**-ಎ.ಬಿ. ಶ್ಯಾಮಾಚಾರ್ಯ**

'ತಿಳಿದಿರೋಣ'- ಗ್ರಂಥ ಶೀರ್ಷಿಕೆ. ಇದು ಇಲ್ಲದ್ದನ್ನು ತಿಳಿಯದ್ದನ್ನು ತಿಳಿಸಲೆಂದಲ್ಲ. ಅನೇಕ ಮಾಹಿತಿ ಸಂಗ್ರಹ ಇಲ್ಲಿದೆ. ಪ್ರಮೇಯ ಸಂಗ್ರಹ, ಪುನರಾವಲೋಕನ ಸಾಧನೆಗೆ ಸೋಪಾನ.

# ವಿಷಯಾನುಕ್ರಮಣಿಕಾ


| | |
|---|---|
| ಭಗವಂತನ ಸೃಷ್ಟಿ ವೈಶಿಷ್ಟ್ಯ | 1 |
| ಭಗವಂತನ ದಶಾವತಾರಗಳ ವೈಭವ | 2 |
| ಕೇಶವಾದಿ ಚತುರ್ವಿಂಶತಿ ರೂಪಗಳು | 3 |
| ಭಗವಂತನ ವಿಶೇಷ ರೂಪಗಳು | 4 |
| ಅಜಾದಿ ವರ್ಣನಿಯಾಮಕ ಭಗವದ್ರೂಪಗಳು | 5 |
| ಗಾಯತ್ರೀ ವೈಭವ | 6 |
| ಓಂಕಾರಗತ ಅಕ್ಷರ ಭಗವದ್ರೂಪಗಳು | 7 |
| ನಿತ್ಯ ಮಾಡುವ ಕರ್ಮಗಳಲ್ಲಿ ಭಗವಂತನ ರೂಪ ಚಿಂತನೆ | 8 |
| ಸಾಲಿಗ್ರಾಮದ ಬಗ್ಗೆ ವಿಶೇಷ ಮಾಹಿತಿ | 9 |
| ವೇದ ವಿಭಾಗ ಹಾಗೂ ಬ್ರಹ್ಮಸೂತ್ರಗಳು | 16 |
| ಭಾರತೀಯ ತತ್ತ್ವದರ್ಶನಗಳ ವರ್ಗೀಕರಣ | 18 |
| ಶ್ರೀಮದಾಚಾರ್ಯರ ಉಪನಿಷತ್‌ಭಾಷ್ಯೋಕ್ತ ಋಷಿದೇವತಾ ವಿವರ | 19 |
| ಶ್ರೀಮದಾಚಾರ್ಯ ಮಧ್ವರ ಸರ್ವಮೂಲಗ್ರಂಥಗಳ ವಿವರ | 20 |
| ತತ್ತ್ವಗಳ ವಿಂಗಡನೆ | 21 |
| ಪುರಾಣ ಪ್ರಪಂಚ | 24 |
| ಮಹಾಭಾರತ ಪರ್ವಗಳ ವಿವರ | 26 |
| ಪಾಂಡವರು – ಕೌರವರು | 27 |
| ಮಹಾಭಾರತದ ಮುಖ್ಯಪಾತ್ರಗಳ ಗುಣಧರ್ಮ | 28 |
| ಶ್ರೀಮದ್ಭಗವದ್ಗೀತಾ ವೈಭವ | 29 |
| ವೇದವ್ಯಾಸರ ಪರಿವಾರ | 30 |
| ಶ್ರೀಮದ್ಭಾಗವತ ಶ್ರೀಕೃಷ್ಣ ಪ್ರತಿಮೆ | 31 |
| ಶ್ರೀಮದ್ಭಾಗವತಾಂತರ್ಗತ ವಿಶೇಷಾಃ | 32 |
| ಶ್ರೀಮದ್ಭಾಗವತದ ಸ್ಕಂದ–ಅಧ್ಯಾಯ–ಶ್ಲೋಕ ಸಂಖ್ಯೆಗಳು | 34 |
| ಶ್ರೀಕೃಷ್ಣನ ಅಷ್ಟಮಹಿಷಿಯರು ಹಾಗೂ ಅವರ ಸಂತಾನ | 35 |
| 14 ಮನ್ವಂತರಗಳು (ಬ್ರಹ್ಮದೇವರ ಒಂದು ದಿನ) – ವಿವರ | 36 |
| ಮನ್ವಂತರಗಳ ಬಗೆಗಿನ ಮಾಹಿತಿಗಳು | 37 |
| ಸ್ವಾಯಂಭುವ ಮನುವಿನ ಹೆಣ್ಣು ಸಂತಾನ | 38 |
| ಶ್ರೀರಾಮಚಂದ್ರನಿಂದ ಮುಂದುವರೆದ ವಂಶ (ಸೂರ್ಯವಂಶ) | 39 |
| ಕಲಿಯುಗದ ಶಕಪುರುಷರು | 40 |
| ಚತುರ್ಮುಖ ಬ್ರಹ್ಮರ ಪ್ರಜಾಪತಿ ಪುತ್ರರು | 41 |
| ಋಜುಗಳ ಶತರೂಪಗಳು | 42 |
| 32 ಕಕ್ಷಾ ತಾರತಮ್ಯ | 43 |
| ಜೀವರ ಕಲ್ಪ ಸಾಧನೆ | 47 |
| ಸಾತ್ವಿಕ ಜೀವರ ಭಗವದಪರೋಕ್ಷ ತಾರತಮ್ಯ | 48 |
| ಅನಂತ ಜೀವರ ಲಕ್ಷಣಗಳಲ್ಲಿರುವ ತಾರತಮ್ಯ | 49 |
| ಮಾನವನ ಶರೀರಸ್ಥ ನಾಡಿಗಳ ವಿವರ | 50 |

ನವವಿಧ ಭಕ್ತಿ – ನವವಿಧ ದ್ವೇಷ 51
ದೈತ್ಯತಾರತಮ್ಯವಿವರ 52
ತಮೋಯೋಗ್ಯರಲ್ಲಿಯ ಗುಣಗಳಲ್ಲಿ ನೀಚತ್ವ 53
ಆಯಾಕಾಲದಲ್ಲಿ ನೆನೆಯಬೇಕಾದ ಭಗವನ್ನಾಮಗಳು 54
ಭೋಜನ ಪದಾರ್ಥಗಳ ಅಭಿಮಾನಿ ಹಾಗೂ ಭಗವದ್ರೂಪಗಳು 55
ನದಿಗಳಲ್ಲಿ ಸನ್ನಿಹಿತ ಭಗವನ್ಮೂರ್ತಿಗಳು 56
ದ್ರವ್ಯಾಭಿಮಾನಿ ದೇವತೆಗಳು 57
ಚತುರ್ವಿಂಶತಿ ತತ್ತ್ವಗಳ ವಿವರ 58
ಶ್ರೀ ಹರಿವಾಯುಸ್ತುತಿ ಶ್ಲೋಕಗಳ ಅಭೀಷ್ಟಫಲ 59
ಗೋವಿನ ಮಹಾತ್ಮೆ 60
ದಿಗಭಿಮಾನಿ ದೇವತೆಗಳ ಲಕ್ಷಣಗಳು 63
ಷೋಡಶ ಸಂಸ್ಕಾರಗಳು 64
ಚತುಷಷ್ಠಿ ಕಲಾಗಳು 66
ವೈಷ್ಣವ ಯೋಗಗಳು – 24, ಸನ್ಯಾಸಿಗಳು – ನಾಲ್ಕು ವಿಧ 67
ದೇವಪೂಜಾಕಾಲದಲ್ಲಿ ಸ್ಮರಿಸಬೇಕಾದ ಅಭಿಮಾನಿ ದೇವತೆಗಳು 68
ಶ್ರೀಹರಿಗೆ ನೈವೇದ್ಯ ನಿವೇದನೆ 69
ನಿತ್ಯ ಭೋಜನ ಸಮಯದಲ್ಲಿಯ ರೀತಿ ನೀತಿಗಳು 70
ಕನ್ಯೆಯಲ್ಲಿರಬೇಕಾದ ಸದ್ಗುಣಗಳು, ಸುಮಂಗಲೀಯರು.... 74
ಪೂಜಾವಿಧಾನಗಳು 75
ಸಿದ್ಧಿ ಐಶ್ವರ್ಯಗಳು, 8 ಇತರ ಅಷ್ಟಸಿದ್ಧಿಗಳು 76
32 ಸಲ್ಲಕ್ಷಣಗಳು, ಯಮ–ನಿಯಮಗಳು 77
ದೀಪದ ಮಹತ್ವ 78
ಶ್ರೀತುಳಸೀ ವೈಭವ 82
ವೀಳೆಯ ಎಲೆ (ವಿಳೇದೆಲೆ, ವೀಳ್ಯದೆಲೆ) ಯ ವಿಶೇಷ 85
ಕಾಲಾಭಿಮಾನಿ ದೇವತೆಗಳು 86
ಪಂಚಾಂಗ, ಅಭಿಮಾನಿ ದೇವತೆಗಳು 88
ದ್ವಾದಶಮಾಸ ಪಕ್ಷ ಋತುಗಳಲ್ಲಿಯ ಭಗವದ್ರೂಪಗಳು 89
ಸಂವತ್ಸರಾದಿಗಳು 90
ಗೃಹವಾಸ್ತು ನಕ್ಷೆ 91
ನಕ್ಷತ್ರಗಳ ವೈಭವ 92
ನವಗ್ರಹಗಳ ಉಪಯುಕ್ತ ವಿವರ 94
ಪ್ರಾಚೀನ ಗಣನಾಕ್ರಮ, ಪ್ರಾಚೀನ ಕಾಲಗಣನೆ 96
ಕಾಲದ ಪರಿಮಾಣ ವೈಭವ 97
ಕಾಲಮಾನ, ಯುಗಮಾನ 98
ಮಹಾಪರ್ವಕಾಲಗಳು 99
ನವರತ್ನಗಳ ವಿಶೇಷ ಮಾಹಿತಿ 100
ಇತರ ಕೆಲ ಮಾಹಿತಿಗಳು 104

# ಭಗವಂತನ ಸೃಷ್ಟಿ ವೈಶಿಷ್ಟ್ಯ

ಜಲಜಾಃ ನವಲಕ್ಷಾಸ್ತು ಸ್ಥಾವರಾಃ ಲಕ್ಷವಿಂಶತಿ ।
ಕ್ರಿಮಿಜಾಃ ರುದ್ರ ಸಂಖ್ಯಾಶ್ಚ ಪಕ್ಷಿಣಾಂ ದಶಲಕ್ಷಕಮ್ ।
ತ್ರಿಂಶಲ್ಲಕ್ಷ್ಯಂತು ಪಶ್ವಾದಿ ಚತುರ್ಲಕ್ಷ್ಯಂತುಂ ಮಾನುಷಾಃ ॥ - ಪದ್ಮಪುರಾಣ

## I. 84 ಲಕ್ಷ ಯೋನಿಗಳು

| | | | |
|---|---|---|---|
| ಜಲಯೋನಿ | - 9 ಲಕ್ಷ | ವೃಕ್ಷಾದಿ ಯೋನಿ | - 20 ಲಕ್ಷ |
| ಕ್ರಿಮಿ ಯೋನಿ | - 11 ಲಕ್ಷ | ಅಂಡಜ ಯೋನಿ | - 10 ಲಕ್ಷ |
| ಪಶು ಯೋನಿ | - 30 ಲಕ್ಷ | ಮಾನುಷ ಯೋನಿ | - 4 ಲಕ್ಷ |

## II.

ಸ್ವೇದಜ – 11 ಲಕ್ಷ
ಉದ್ಭಿಜ – 20 ಲಕ್ಷ
ಅಂಡಜ – 19 ಲಕ್ಷ → ಜಲಚರ – 9 ಲಕ್ಷ; ಪಕ್ಷಿಗಳು – 10 ಲಕ್ಷ
ಜರಾಯುಜ – 34 ಲಕ್ಷ → ಪಶುಗಳು – 30 ಲಕ್ಷ; ಮಾನವರು – 4 ಲಕ್ಷ

## III. ಆಹಾರಾದಿಗಳಿಗನುಸಾರವಾದ 84 ಲಕ್ಷ ಯೋನಿ ಜೀವರ ವಿಭಜನೆ.

| | | | |
|---|---|---|---|
| ಚಂದ್ರಿಕಾ ಭಕ್ಷಣ | - 2 ಲಕ್ಷ | ಮಾಂಸ ಭಕ್ಷಣ | - 12 ಲಕ್ಷ |
| ಪರ್ಣ ಭಕ್ಷಣ | - 7 ಲಕ್ಷ | ಕಾಷ್ಟ ಭಕ್ಷಣ | - 2 ಲಕ್ಷ |
| ಮಧು ಭಕ್ಷಣ | - 1 ಲಕ್ಷ | ಅಗ್ನಿ ಭಕ್ಷಣ | - 1 ಲಕ್ಷ |
| ಜಲ ಭಕ್ಷಣ | - 12 ಲಕ್ಷ | ವಾಯು ಭಕ್ಷಣ | - 4 ಲಕ್ಷ |
| ಕುಣಪ ಭಕ್ಷಣ | - 7 ಲಕ್ಷ | ಅಂಧಕಾರ ಭಕ್ಷಣ | - 20 ಲಕ್ಷ |
| ವ್ರೀಹ್ಯಾದಿ ಭಕ್ಷಣ | - 16 ಲಕ್ಷ | | **84 ಲಕ್ಷ** |

## IV. ಸ್ಥೂಲ ದೇಹಗಳು :

1. ಖೇಚರ (ಆಕಾಶದಲ್ಲಿ ಸಂಚರಿಸುವ ದೇಹಧಾರಿಗಳು)
2. ಭೂಚರ (ಭೂಮಿಯ ಮೇಲೆ ಸಂಚರಿಸುವ ದೇಹಧಾರಿಗಳು)
3. ವಾರಿಚರ (ನೀರಿನಲ್ಲಿ ಸಂಚರಿಸುವ ದೇಹಧಾರಿಗಳು)
4. ನಿಶಾಚರ (ರಾತ್ರಿಯಲ್ಲಿ ಸಂಚರಿಸುವ ದೇಹಧಾರಿಗಳು)

ಕೆಲವು ಜೀವರಾಶಿಗಳು ಒಂದಕ್ಕೂ ಹೆಚ್ಚಿನ ಅವಕಾಶದಲ್ಲಿ ಸಂಚರಿಸುವವುಗಳೂ ಇವೆ.

# ಭಗವಂತನ ದಶಾವತಾರಗಳ ವೈಭವ

| ದಶಾವತಾರಗಳು | ಲಕ್ಷ್ಮೀ ರೂಪಗಳು | ಅವತಾರದ ಕಾಲ | ಅವತಾರ ಮಾಡಿದ ದಿನ | ಅವತರಿಸಿದ ಯುಗ | ನಿಯಾಮಕ-ಜ್ಞಾನೇಂದ್ರಿಯ | ಮಂತ್ರ | ಆಯುಧಗಳು |
|---|---|---|---|---|---|---|---|
| ಮತ್ಸ್ಯ | ವೇದಾ | ಅಪರಾಹ್ಣ | ಚೈತ್ರ ಶು. ತೃತೀಯಾ | ಸೃಷ್ಟಿಪೂರ್ವ | ಶ್ರವಣ | – | ಚಕ್ರ ಶಂಖ ಗದಾಪದ್ಮ |
| ಕೂರ್ಮ | ವೇದವತೀ | ಸಾಯಂ | ವೈಶಾಖ ಶು. ಚತುರ್ದಶೀ | ಕೃತಯುಗ | ಚಕ್ಷು | – | '' |
| ವರಾಹ | ಧಾತ್ರೀ (ಧರಿಣೀ) | ಅಪರಾಹ್ಣ | ಭಾದ್ರಪದ ಶು. ತೃತೀಯಾ | ಸೃಷ್ಟಿಪೂರ್ವ ಕೃತಯುಗ | ತ್ವಕ್ | ಓಂ ಹುಂ ವರಾಹಾಯ ನಮಃ | '' |
| ನರಸಿಂಹ | ಮಹಾಲಕ್ಷ್ಮೀ | ಸಾಯಂ | ವೈಶಾಖ ಶು. ಚತುರ್ದಶೀ | ಕೃತಯುಗ | ರಸನ | ಓಂ ಹಂ... ಲಕ್ಷ್ಮೀನರಸಿಂಹಾಯ ನಮಃ | ಶಂಖ,ಚಕ್ರ ಉಗುರುಗಳು |
| ವಾಮನ | ಸುಖಾ | ಮಧ್ಯಾಹ್ನ | ವೈಶಾಖ ಶು.ತೃತೀಯಾ | ಕೃತಯುಗ | ಘ್ರಾಣ | ಓಂ ವಾಂ ವಾಮನಾಯ ನಮಃ | – |
| ಪರಶು-ರಾಮ | ಹರಿಣೀ | ಮಧ್ಯಾಹ್ನ | ವೈಶಾಖ ಶು. ತೃತೀಯಾ | ಕೃತಯುಗ | ವಾಕ್ | ಓಂ ಭಾಂ ಭಾರ್ಗವಾಯ ನಮಃ | ಕೊಡಲಿ, ಧನುಸ್ಸು |
| ರಾಮ | ಸೀತಾ | ಮಧ್ಯಾಹ್ನ | ಚೈತ್ರ ಶು. ನವಮೀ | ತ್ರೇತಾಯುಗ | ಪಾಣಿ | ಓಂ ರಾಂ ರಾಮಾಯ ನಮಃ | ಧನುಸ್ಸು, ಬಾಣ |
| ಕೃಷ್ಣ | ರುಕ್ಮಿಣೀ, ಸತ್ಯಭಾಮಾ | ಮಧ್ಯರಾತ್ರಿ | ಶ್ರಾವಣ ಕೃ. ಅಷ್ಟಮೀ | ದ್ವಾಪರ | ಪಾದ | ಓಂ ಕ್ಲೀಂ ಕೃಷ್ಣಾಯ ನಮಃ | ಚಕ್ರ ಶಂಖ ಗದಾಪದ್ಮ |
| ಬುದ್ಧ | ರೇವತೀ | ಸಾಯಂ | ಆಶ್ವೀನ ಶು.ದಶಮೀ | ದ್ವಾಪರಾಂತ್ಯ | ಪಾಯು | – | ಚಕ್ರ, ಶಂಖ, ಬೆತ್ತ |
| ಕಲ್ಕಿ | ಪ್ರಭಾ | ಸಾಯಂ | ಶ್ರಾವಣ ಶು.ಷಷ್ಠೀ | ಕಲಿಯುಗಾಂತ್ಯ | ಉಪಸ್ಥ | – | ಖಡ್ಗ, ಗುರಾಣಿ |

ಭಗವಂತನಾದ ಮಹಾವಿಷ್ಣುವಿನ ಅನಂತ ಅವತಾರಗಳಲ್ಲಿ ಈ ದಶಾವತಾರಗಳು ಒಂದು ಸಮೂಹವಾಗಿರುತ್ತದೆ.

# ಕೇಶವಾದಿ ಚತುರ್ವಿಂಶತಿ ರೂಪಗಳು

| ಭಗವಂತನ ರೂಪ | ಲಕ್ಷ್ಮೀರೂಪ | ಆಯುಧಗಳು (ಬಲಗೈಯಿಂದ ಪ್ರದಕ್ಷಿಣ ಕ್ರಮ) | | | | ನಿಯಾಮಕ ಮಾಸ |
|---|---|---|---|---|---|---|
| ಕೇಶವ | ಶ್ರೀ | ಶಂಖ | ಚಕ್ರ | ಗದಾ | ಪದ್ಮ | ಮಾರ್ಗಶಿರ |
| ನಾರಾಯಣ | ಲಕ್ಷ್ಮೀ | ಪದ್ಮ | ಗದಾ | ಚಕ್ರ | ಶಂಖ | ಪೌಷ್ಯ |
| ಮಾಧವ | ಕಮಲಾ | ಚಕ್ರ | ಶಂಖ | ಪದ್ಮ | ಗದಾ | ಮಾಘ |
| ಗೋವಿಂದ | ಪದ್ಮ | ಗದಾ | ಪದ್ಮ | ಶಂಖ | ಚಕ್ರ | ಫಾಲ್ಗುಣ |
| ವಿಷ್ಣು | ಪದ್ಮಿನೀ | ಪದ್ಮ | ಶಂಖ | ಚಕ್ರ | ಗದಾ | ಚೈತ್ರ |
| ಮಧುಸೂದನ | ಕಮಲಾಲಯಾ | ಶಂಖ | ಪದ್ಮ | ಗದಾ | ಚಕ್ರ | ವೈಶಾಖ |
| ತ್ರಿವಿಕ್ರಮ | ರಮಾ | ಗದಾ | ಚಕ್ರ | ಶಂಖ | ಪದ್ಮ | ಜ್ಯೇಷ್ಠ |
| ವಾಮನ | ವೃಷಾಕಪೀ | ಚಕ್ರ | ಗದಾ | ಪದ್ಮ | ಶಂಖ | ಆಷಾಢ |
| ಶ್ರೀಧರ | ಧನ್ಯಾ | ಚಕ್ರ | ಗದಾ | ಶಂಖ | ಪದ್ಮ | ಶ್ರಾವಣ |
| ಹೃಷೀಕೇಶ | ಬುದ್ಧಿ | ಚಕ್ರ | ಪದ್ಮ | ಶಂಖ | ಗದಾ | ಭಾದ್ರಪದ |
| ಪದ್ಮನಾಭ | ಯಜ್ಞಾ | ಪದ್ಮ | ಚಕ್ರ | ಗದಾ | ಶಂಖ | ಆಶ್ವೀನ |
| ದಾಮೋದರ | ಇಂದಿರಾ | ಶಂಖ | ಗದಾ | ಚಕ್ರ | ಪದ್ಮ | ಕಾರ್ತೀಕ |
| ಸಂಕರ್ಷಣ | ಹರಿಣ್ಯಾ | ಶಂಖ | ಪದ್ಮ | ಚಕ್ರ | ಗದಾ | |
| ವಾಸುದೇವ | ಹರಿಣೀ | ಶಂಖ | ಚಕ್ರ | ಪದ್ಮ | ಗದಾ | |
| ಪ್ರದ್ಯುಮ್ನ | ಸತ್ಯಾ | ಶಂಖ | ಗದಾ | ಪದ್ಮ | ಚಕ್ರ | |
| ಅನಿರುದ್ಧ | ನಿತ್ಯಾ | ಗದಾ | ಶಂಖ | ಪದ್ಮ | ಚಕ್ರ | |
| ಪುರುಷೋತ್ತಮ | ಆನಂದಾ | ಪದ್ಮ | ಶಂಖ | ಗದಾ | ಚಕ್ರ | |
| ಅಧೋಕ್ಷಜ | ಅಪ್ರಜ್ಞಾ | ಗದಾ | ಶಂಖ | ಚಕ್ರ | ಪದ್ಮ | |
| ನಾರಸಿಂಹ | ಸುಖಾ | ಪದ್ಮ | ಗದಾ | ಶಂಖ | ಮಾತ್ರ | |
| ಅಚ್ಯುತ | ಸುಗಂಧೀ | ಪದ್ಮ | ಚಕ್ರ | ಶಂಖ | ಗದಾ | |
| ಜನಾರ್ದನ | ಸುಂದರೀ | ಚಕ್ರ | ಶಂಖ | ಗದಾ | ಪದ್ಮ | |
| ಉಪೇಂದ್ರ | ವಿದ್ಯಾ | ಗದಾ | ಚಕ್ರ | ಪದ್ಮ | ಶಂಖ | |
| ಹರಿ | ಸುಶೀಲಾ | ಚಕ್ರ | ಪದ್ಮ | ಗದಾ | ಶಂಖ | |
| ಶ್ರೀಕೃಷ್ಣ | ಸುಲಕ್ಷಣಾ | ಗದಾ | ಪದ್ಮ | ಚಕ್ರ | ಶಂಖ | |

# ಭಗವಂತನ ವಿಶೇಷ ರೂಪಗಳು

ಭಕ್ತಾಪರಾಧ ಸಹಿಷ್ಣುವಾದ ಶ್ರೀಹರಿ ತನ್ನ 18 ರೂಪಗಳಿಂದ ಸದಾ ತತ್ತ್ವಗಳಲ್ಲಿದ್ದು ಜೀವರನ್ನು ಸಂರಕ್ಷಿಸುವ. **18 ರೂಪಗಳು :**

**ಓಂ ಹಂಸಃ ಶುಚಿಷದ್ವಸುರಂತರಿಕ್ಷ ಸದ್ಹೋತಾ ವೇದಿಷದತಿರ್ದುರೋಣಸತ್ ।**
**ನೃಷದ್ವರಸದೃತ ಸ ದ್ವ್ಯೋಮ ಸದಬ್ಜಾಗೋಜಾ ಋತಜಾ ಋತಮ್ ॥**

| | ಅಧಿಷ್ಠಾನ (ತತ್ತ್ವಗಳು) | ಭಗವಂತನ ರೂಪ |
|---|---|---|
| 1. | ಮನುಷ್ಯರಲ್ಲಿ | ನೃಷತ್ ರೂಪದಿಂದ |
| 2. | ಸುರಶ್ರೇಷ್ಠರಲ್ಲಿ | ದುರೋಣಸತ್ ರೂಪದಿಂದ |
| 3. | ಇಂದ್ರಿಯಗಳಲ್ಲಿ | ಹೋತಾ ರೂಪದಿಂದ |
| 4. | ಸರ್ವಕಾಲದಲ್ಲಿರುವುದು (ವ್ಯಾಪ್ತ) | ಋತ ರೂಪದಿಂದ |
| 5. | ನಿರ್ದೋಷವಾದ ವೇದದಲ್ಲಿ | ಸತ್ ರೂಪಿಯಾಗಿ |
| 6. | ಜಲದಲ್ಲಿ | ಅಬಾಜ ರೂಪಿಯಾಗಿ (ಉದಕರಸ, ಅಮೃತ, ಚಂದ್ರರಲ್ಲಿ) |
| 7. | ಭೂಮಿಯಲ್ಲಿ | ಗೋಜಾ ರೂಪದಿಂದ |
| 8. | ಅದ್ರಿ (ಪರ್ವತಗಳಲ್ಲಿ) | ಅದ್ರಿಜಾ (ವಜ್ರರತ್ನಾದಿ , ಪಶುಗಳಲ್ಲಿ) |
| 9. | ಮುಖ್ಯಪ್ರಾಣನಲ್ಲಿ | ಶುಚಿಷತ್ (ಜೀವರನ್ನು ಪವಿತ್ರೀಕರಿಸುವ ರೂಪ) |
| 10. | ಚಿದ್ದೇಹದಲ್ಲಿ | ಸದ್ವ್ಯೋಮರೂಪ |
| 11. | ಗುರುಗಳಲ್ಲಿ (ಸದ್ಗುರುಗಳಲ್ಲಿ) | ವೇದಿಷತ್ (ಜ್ಞಾನಪ್ರದರೂಪ) |
| 12. | ಬಂಗಾರ ಮೊದಲಾದವುಗಳಲ್ಲಿ | ವಸುಷತ್ ರೂಪ |
| 13. | ಆಕಾಶದಲ್ಲಿ | ಅಂತರಿಕ್ಷಸತ್ (ವ್ಯಾಪ್ತನಾದ ರೂಪ) |
| 14. | ಪೂಜ್ಯರಲ್ಲಿ | ವರಸತ್ ರೂಪ |
| 15. | ಬಿಕ್ಷುಕರು (ಅತಿಥಿ ಅಭ್ಯಾಗತರು) | ಅತಿಥಿ |
| 16. | ಸೂರ್ಯನಲ್ಲಿ | ಹಂಸರೂಪ (ಸಸ್ಯಾದಿ ಸಂರಕ್ಷಿಸುವುದು) |
| 17. | ಮುಖ್ಯಪ್ರಾಣ (ದೇಹಗತವಿಶೇಷ) | ಹಂಸರೂಪದಿಂದ(ಜೀವರ ಶ್ವಾಸಕ್ರಿಯೆ ನಡೆಸುವ) |
| 18. | ಸರ್ವತ್ರವ್ಯಾಪ್ತನಾಗಿ (ಅಣುರೇಣು ತೃಣಕಾಷ್ಠದಲ್ಲಿ, ಅಣುಮಹತ್ತಿನಲ್ಲಿ) | ಬೃಹತ್ ರೂಪ |

**ವಿಶೇಷವಾದ ರೂಪಗಳು:** ಭೂಮಿ-ಕುಸ್ಥರೂಪ, ದಿಕ್ಕುಗಳು-ಆಶಾಸ್ಥ ಸರ್ವರಲ್ಲಿ-ಸಮಸ್ತ ಲೋಕ-ವಿಶೋಧನ, ವಸ್ತ್ರ-ಮಾನದ, ಗ್ರಾಮಪ-ಅಗ್ರಣಿ, ಮನುಷ್ಯರಲ್ಲಿ-ಗ್ರಾಮಣಿ, ರಕ್ಷಣೆಗಾಗಿ-ಕ್ಷೇಮ, ಆಕಾಶ-ಖಸ್ಥ ವಿಭಿನ್ನ ಮನುಷ್ಯರಲ್ಲಿ-ವ್ಯಸ್ತ ಹತ್ತಿರದಲ್ಲಿ-ಉಪಸ್ಥ ಶಾಸ್ತ್ರದಲ್ಲಿ-ಜ್ಞಾನದ, ದಾನಶೀಲ ರಲ್ಲಿ-ವದಾನ್ಯ, ಹಳ್ಳಿಗಳಲ್ಲಿ-ಶ್ರೀಮಾನ್, ಎಲ್ಲರಿಗೂ ಲಾಭದಾಯಕ-ಯೋಗ. ಹೀಗೆ ಅನೇಕ.

# ಅಜಾದಿ ವರ್ಣನಿಯಾಮಕ ಭಗವದ್ರೂಪಗಳು

| ವರ್ಣ | ಭಗವದ್ರೂಪ | ಶರೀರಗತ ಸ್ಥಾನ | ವರ್ಣ | ಭಗವದ್ರೂಪ | ಶರೀರಗತ ಸ್ಥಾನ |
|---|---|---|---|---|---|
| ಅಂ | ಅಜ | ಶಿರಸ್ಸು | ಟಂ | ಟಂಕೀ | ಬಲಗಾಲಿನ ತೊಡೆಸಂಧಿ |
| ಆಂ | ಆನಂದ | ಮುಖ | ಠಂ | ಠಳಕ | ಬಲಗಾಲಿನ ಕಾಲುಗಂಟು |
| ಇಂ | ಇಂದ್ರ | ಬಲಗಣ್ಣು | ಡಂ | ಡರಕ | ಬಲಗಾಲಿನ ಮಣಿಗಂಟು |
| ಈಂ | ಈಶಾನ | ಎಡಗಣ್ಣು | ಢಂ | ಢರೀ | ಬಲಗಾಲಿನ ಬೆರಳುಗಳು |
| ಉಂ | ಉಗ್ರ | ಬಲಗಿವಿ | ಣಂ | ಣಾತ್ಮಾ | ಬಲಗಾಲಿನ ಬೆರಳ ತುದಿ |
| ಊಂ. | ಊರ್ಜಾ | ಎಡಗಿವಿ | ತಂ | ತಾರ | ಎಡಗಾಲಿನ ತೊಡೆಸಂಧಿ |
| ಋಂ | ಋತಂಬರ | ಬಲಮೂಗಿನ ಹೊಳ್ಳೆ | ಥಂ | ಥಭ | ಎಡಗಾಲಿನ ಕಾಲುಗಂಟು |
| ೠಂ | ೠಘ | ಎಡಮೂಗಿನ ಹೊಳ್ಳೆ | ದಂ | ದಂಡಿ | ಎಡಗಾಲಿನ ಮಣಿಗಂಟು |
| ಲೃಂ | ಲೃಶ | ಬಲಗೆನ್ನೆ | ಧಂ | ಧನ್ವೀ | ಎಡಗಾಲಿನ ಬೆರಳುಗಳು |
| ಲೄಂ | ಲೄಜ | ಎಡಗೆನ್ನೆ | ನಂ | ನಮ್ಯ | ಎಡಗಾಲಿನ ಬೆರಳತುದಿ |
| ಎಂ | ಏಕಾತ್ಮ | ಮೇಲ್ತುಟಿ | ಪಂ | ಪರ | ಬಲಹೊಟ್ಟೆ |
| ಐಂ | ಐರ | ಕೆಳತುಟಿ | ಫಂ | ಫಲಿ | ಎಡಹೊಟ್ಟೆ |
| ಓಂ | ಓಜೋಭೃತ್ | ಮೇಲಿನ ದಂತಪಂಕ್ತಿ | ಬಂ | ಬಲಿ | ಪೃಷ್ಠ |
| ಔಂ | ಔರಸ | ಕೆಳಗಿನ ದಂತಪಂಕ್ತಿ | ಭಂ | ಭಗ | ಗುಹ್ಯ |
| ಅಂ | ಅಂತ | ತಲೆಯ ಮೇಲ್ಭಾಗ | ಮಂ | ಮನು | ಹೊಟ್ಟೆಯ ತಲ |
| ಅಃ | ಅರ್ಧಗರ್ಭ | ನಾಲಿಗೆ | ಯಂ | ಯಜ್ಞ | ಹೃದಯ – ಎದೆ |
| ಕಂ | ಕಪಿಲ | ಬಲಗೈ ಕಂಕಳು | ರಂ | ರಾಮ | ತ್ವಗಿಂದ್ರಿಯ |
| ಖಂ | ಖಪತಿ | ಬಲ ಕೈಗಂಟು | ಲಂ | ಲಕ್ಷ್ಮೀಪತಿ | ಚರ್ಮ |
| ಗಂ | ಗರುಡಾಸನ | ಬಲಗೈ ಮಣಿಗಂಟು | ವಂ | ವರ | ಮಾಂಸ |
| ಘಂ | ಘರ್ಮಾ | ಬಲಗೈ ಬೆರಳುಗಂಟು | ಶಂ | ಶಾಂತಸಂವಿತ್ | ರಕ್ತ |
| ಙಂ | ಙಸಾರ | ಬಲಗೈ ಬೆರಳತುದಿ | ಷಂ | ಷಡ್ಗುಣಾತ್ಮ | ಮೇಧಸ್ಸು |
| ಚಂ | ಚಾರ್ವಾಂಗ | ಎಡಗೈ ಕಂಕಳು | ಸಂ | ಸಾರಾತ್ಮ | ಮಜ್ಜಾ |
| ಛಂ | ಛಂದೋಗಮ್ಯ | ಎಡಗೈ ಕೈಗಂಟು | ಹಂ | ಹಂಸ | ಅಸ್ಥಿ ಸಂಧಿಗಳಲ್ಲಿ |
| ಜಂ | ಜನಾರ್ದನ | ಎಡಗೈ ಮಣಿಗಂಟು | ಳಂ | ಳಾಳುಕ | ಪ್ರಾಣ |
| ಝಾಂ | ಝಾಂಟಿತಾರಿ | ಎಡಗೈ ಬೆರಳುಗಂಟು | ಕ್ಷಂ | ಲಕ್ಷ್ಮೀನರಸಿಂಹ | ಜೀವನ ಸ್ವರೂಪದಲ್ಲಿ |
| ಞಂ | ಞಮ | ಎಡಗೈ ಬೆರಳತುದಿ | | | |

# ಗಾಯತ್ರೀ ವೈಭವ

ವ್ಯಾಹೃತಿಗಳ ವ್ಯಾಖ್ಯಾನವಾಗಿ, ಪುರುಷಸೂಕ್ತದ ಸಂಕ್ಷೇಪವಾಗಿ, ಸಕಲ ವೇದಾರ್ಥಗರ್ಭಿತವಾದ ಮಂತ್ರವೇ **ಗಾಯತ್ರೀ**. ವಿಶ್ವಾಮಿತ್ರರಿಗೆ ಕಂಡ ಈ ಮಂತ್ರದ 24 ವರ್ಣಗಳೂ ವಿಶಿಷ್ಟವಾದವುಗಳೆಂದು ಇಲ್ಲಿ ಕಾಣಬಹುದು.

| ಕ್ರ.ಸಂ. | ಅಕ್ಷರಗಳು | ಅಭಿಮಾನಿ ದೇವತೆ | ಹರಿಯ ರೂಪ | ತತ್ವಗಳು |
|---|---|---|---|---|
| 1 | **ತತ್** | ಬ್ರಹ್ಮ | ಕೇಶವ | ನಯನ |
| 2 | **ಸ** | ಪ್ರಾಣ | ನಾರಾಯಣ | ನಾಸಿಕ |
| 3 | **ವಿ** | ಶಂಕರ | ಮಾಧವ | ರಸನ |
| 4 | **ತುಃ** | ಇಂದ್ರ | ಗೋವಿಂದ | ಶ್ರವಣ |
| 5 | **ವ** | ಗಣೇಶ | ವಿಷ್ಣು | ಚರ್ಮ |
| 6 | **ರೇ** | ಆದಿತ್ಯ | ಮಧುಸೂದನ | ಪಾಣಿ |
| 7 | **ಣಿ** | ಪಾರ್ವತಿ | ತ್ರಿವಿಕ್ರಮ | ಪಾದ |
| 8 | **ಯಂ** | ಶೇಷ | ವಾಮನ | ಪಾಯು |
| 9 | **ಭ** | ಪ್ರಜಾಪತಿ | ಶ್ರೀಧರ | ವಾಕ್ |
| 10 | **ರ್ಗೋ** | ಬುಧ | ಹೃಷಿಕೇಶ | ಉಪಸ್ಥ |
| 11 | **ದೇ** | ಶನಿ | ಪದ್ಮನಾಭ | ಮನ |
| 12 | **ವ** | ಗುರು | ದಾಮೋದರ | ಪೃಥಿವಿ |
| 13 | **ಸ್ಯ** | ಅರ್ಯಮಾ | ಸಂಕರ್ಷಣ | ಜಲ |
| 14 | **ಧೀ** | ಜಮದಗ್ನಿ | ವಾಸುದೇವ | ತೇಜ |
| 15 | **ಮ** | ಕಾಮ | ಪ್ರದ್ಯುಮ್ನ | ವಾಯು |
| 16 | **ಹಿ** | ಧರ್ಮ | ಅನಿರುದ್ಧ | ಆಕಾಶ |
| 17 | **ಧಿ** | ಮನು | ಪುರುಷೋತ್ತಮ | ಗಂಧ |
| 18 | **ಯೋ** | ಪಿತೃದೇವತೆ | ಅಧೋಕ್ಷಜ | ರಸ |
| 19 | **ಯೋ** | ವಾಯು | ನಾರಸಿಂಹ | ರೂಪ |
| 20 | **ನಃ** | ಈಶಾನ್ಯ | ಅಚ್ಯುತ | ಸ್ಪರ್ಶ |
| 21 | **ಪ್ರ** | ಮನ್ಮಥ | ಜನಾರ್ಧನ | ಶಬ್ದ |
| 22 | **ಚೋ** | ಲಕ್ಷ್ಮಣ | ಉಪೇಂದ್ರ | ಅಹಂಕಾರ |
| 23 | **ದ** | ವ್ಯಾಸ | ಹರಿ | ಮಹತ್ |
| 24 | **ಯಾತ್** | ಅನಿರುದ್ಧ | ಶ್ರೀಕೃಷ್ಣ | ಅವ್ಯಕ್ತ |

# ಓಂಕಾರಗತ ಅಕ್ಷರ ಭಗವದ್ರೂಪಗಳು

| ಓಂಕಾರ ಗತ ಅಕ್ಷರ | ದೇಹಗತಭಾಗ | | ಭಗವದ್ರೂಪ | ವರ್ಣಗತರೂಪ | ರೂಪ ಸಂಖ್ಯೆ |
|---|---|---|---|---|---|
| ಅ | ಲಿಂಗದೇಹ(16ಕಲೆಗಳು) | | ವಿಶ್ವ | ಅಜಾದಿ (ಅರ್ಧ) | 16 |
| – | ಸ್ಥೂಲದೇಹ | – | – | – | – |
| ಉ | ಜ್ಞಾನೇಂದ್ರಿಯಗಳು – | 5 | ತೈಜಸ | ಕಪಿಲಾದಿ | 5 |
| ಮ | ಕರ್ಮೇಂದ್ರಿಯಗಳು- | 5 | ಪ್ರಾಜ್ಞ | ಚಾರ್ವಾಗಾದಿ | 5 |
| ನಾದ | ಪಂಚತನ್ಮಾತ್ರ – | 5 | ತುರ್ಯ | ಟಂಕ್ಸಾದಿಣಾತ್ಮ | 5 |
| ಬಿಂದು | ಪಂಚಭೂತ – | 5 | ಆತ್ಮ | ತುನಾದಿನಮ್ಯ | 5 |
| ಘೋಷ | 2 ಮನಸ್ತತ್ವ<br>3 ಅಹಂಕಾರತತ್ವ | 2 | ಅಂತರಾತ್ಮ | ಪರಾದಿಮನು | 5 |
| ಶಾಂತ | ಮಹತತ್ತ್ವ | 1 | ಪರಮಾತ್ಮ | ಯಜ್ಞಾದಿವರ | 4 |
| ಅತಿಶಾಂತ | ಅವ್ಯಕ್ತತತ್ತ್ವ | 1 | ಜ್ಞಾನಾತ್ಮ | ಶಾಂತ ಸಂವಿತ್ | 5 |
| | | | | ಆದಿಳಾಳುಕ | 5 |
| | **24** | | **ಆಜಾದಿ 50 ಮೂರ್ತಿಗಳು** | | **50** |

(ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದ ಪಂಚಮಹಾಯಜ್ಞಸಂಧಿಯಿಂದ ಆಯ್ದ ಭಾಗ)

## ದೇಹಾಂತರ್ಗತ ಅಗ್ನಿ ವಾಯುಗಳ ರೂಪಗಳು

| ಸ್ಥಾನ | ಅಗ್ನಿ | ವಾಯು | ಭಾರತೀ | ಭಗವದ್ರೂಪ |
|---|---|---|---|---|
| ಮುಖ | ಆವಹನೀಯ | ಪ್ರಾಣ | ದ್ಯು | ಅನಿರುದ್ಧ – ಶಾಂತ |
| ಹೃದಯ | ಗಾರ್ಹಪತ್ಯ | ಅಪಾನ | ಕ್ಷಿತಿ | ಪ್ರದ್ಯುಮ್ನ – ಕೃತಿ |
| ನಾಭಿ | ದಕ್ಷಿಣಾಗ್ನಿ | ವ್ಯಾನ | ದಿಜ | ಸಂಕರ್ಷಣ – ಜಯಾ |
| ನಾಭಿ (ಬಲಭಾಗ) | ನಾವಸತ್ತಿ | ಉದಾನ | ವಾಜ | ವಾಸುದೇವ –ಮಾಯಾ |
| ನಾಭಿ (ಎಡಭಾಗ) | ಸಭ್ಯಂಬೆಲೆ | ಸಮಾನ | ವಿದ್ಯುತ್ | ನಾರಾಯಣ – ಲಕ್ಷ್ಮೀ |

# ನಿತ್ಯ ಮಾಡುವ ಕರ್ಮಗಳಲ್ಲಿ ಭಗವಂತನ ರೂಪ ಚಿಂತನೆ

## (ಪಂಚರಾತ್ರಾಗಮ ಪ್ರೋಕ್ತ)

ಪ್ರಾತಃಕಾಲದಲ್ಲಿ ಎದ್ದಾಗ – ಶ್ರೀ ನಾರಾಯಣಾಯ ನಮಃ
ಮಲಮೂತ್ರ ವಿಸರ್ಜನೆಯಲ್ಲಿ – ಶ್ರೀ ಕೇಶವಾಯ ನಮಃ
ಹಲ್ಲುಜ್ಜುವಾಗ – ಶ್ರೀ ಹರಯೇ ನಮಃ
ಮೃತ್ತಿಕಾ ಶೌಚದಲ್ಲಿ – ಶ್ರೀ ತ್ರಿವಿಕ್ರಮಾಯ ನಮಃ
ಮುಖ ತೊಳೆಯುವಾಗ – ಶ್ರೀ ಮಾಧವಾಯ ನಮಃ
ಆಕಳಿಗೆ ನಮಸ್ಕರಿಸುವಾಗ – ಶ್ರೀ ಉದ್ಗೀಥಾಭಿನ್ನ ಶ್ರೀಕೃಷ್ಣಾಯ ನಮಃ
ಹಾಲು ಹಿಂಡುವಾಗ – ಶ್ರೀ ಗೋಪಾಲಕೃಷ್ಣಾಯ ನಮಃ
ತುಳಸೀ ನಮಸ್ಕರಿಸುವಾಗ – ಶ್ರೀ ವಿಷ್ಣವೇ ನಮಃ
ಸ್ನಾನ ಮಾಡುವಾಗ – ಶ್ರೀ ತ್ರಿವಿಕ್ರಮಾಭಿನ್ನ ಪುಂಡರೀಕಾಕ್ಷಾಯ ನಮಃ
ವಸ್ತ್ರ ಧರಿಸುವಾಗ – ಶ್ರೀ ಉಪೇಂದ್ರಾಯ ನಮಃ
ಆಹ್ನೀಕಕ್ಕೆ ಕೂಡುವಾಗ – ಶನೈಶ್ಚರಾಂತರ್ಗತ ಶ್ರೀಕೃಷ್ಣಾಯ ನಮಃ
ಗೋಪೀಚಂದನ ಧರಿಸುವಾಗ – ಶ್ರೀಭೂವರಾಹಾಯ ನಮಃ
ದ್ವಾದಶನಾಮ ಧರಿಸುವಾಗ – ಶುಕ್ಲಪಕ್ಷದಲ್ಲಿ ಕೇಶವಾದಿ ದಾಮೋದರ ಪರ್ಯಂತ, ಕೃಷ್ಣ ಪಕ್ಷದಲ್ಲಿ ಸಂಕರ್ಷಣಾದಿ ಕೃಷ್ಣ ಪರ್ಯಂತ
ನಿರ್ಮಾಲ್ಯ ತೀರ್ಥ ಪ್ರಾಶನದಲ್ಲಿ – ವಿಶ್ವಾಯ ನಮಃ, ತೈಜಸಾಯ ನಮಃ, ಪ್ರಾಜ್ಞಾಯ ನಮಃ
ನಿರ್ಮಾಲ್ಯ ಪ್ರೋಕ್ಷಣೆಯಲ್ಲಿ – ತುರ್ಯಾಭಿನ್ನ ಮುಕುಂದಾಯ ನಮಃ
ಸಂಧ್ಯಾವಂದನೆ ಮಾಡುವಾಗ – ಶ್ರೀ ರಾಮಾಯ ನಮಃ
ಯಜ್ಞೋಪವೀತ ಧಾರಣದಲ್ಲಿ – ಶ್ರೀ ವಾಮನಾಯ ನಮಃ
ತೀರ್ಥಪ್ರಾಶನದಲ್ಲಿ – ಶ್ರೀ ರಾಮಾಯ ನಮಃ, ಶ್ರೀ ಕೃಷ್ಣಾಯ ನಮಃ, ಶ್ರೀ ವೇದವ್ಯಾಸಾಯ ನಮಃ
ಊಟ ಮಾಡುವಾಗ – ಶ್ರೀ ಯೋಗೇಶ್ವರಾಯ ನಮಃ, ಶ್ರೀಗೋವಿಂದಾಯ ನಮಃ
ಗುರುಹಿರಿಯರಿಗೆ ನಮಸ್ಕರಿಸುವಾಗ – ಗರುಡಾಂತರ್ಗತ ಶ್ರೀಹರಯೇ ನಮಃ
ಪ್ರದಕ್ಷಿಣೆ ಮಾಡುವಾಗ – ಶೇಷಾಂತರ್ಗತ ಶ್ರೀ ಹರಯೇ ನಮಃ
ರೋಗಾದಿಗಳು ಬಂದಾಗ –ಶ್ರೀ ಧನ್ವಂತರಯೇ ನಮಃ
ಔಷಧಿ ಸ್ವೀಕರಿಸುವಾಗ – ಶ್ರೀ ವೈದ್ಯರೂಪಿ ಶ್ರೀ ನಾರಾಯಣಾಯ ನಮಃ
ಮಕ್ಕಳನ್ನು ಮುದ್ದಿಸುವಾಗ – ಶ್ರೀ ಕೃಷ್ಣಾಯ ನಮಃ
ಶಾಸ್ತ್ರಾಧ್ಯಯನ ಮಾಡುವಾಗ – ಮಧ್ವಾಂತರ್ಗತ ಶ್ರೀ ವೇದವ್ಯಾಸಾಯ ನಮಃ
ಮಲಗುವಾಗ – ಶ್ರೀ ಪದ್ಮನಾಭಾಯ ನಮಃ

(ಎಲ್ಲ ಕಾಲದಲ್ಲೂ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಎಂದು ಸೇರಿಸಿ ಉಚ್ಚರಿಸಬೇಕು.)

# ಸಾಲಿಗ್ರಾಮದ ಬಗ್ಗೆ ವಿಶೇಷ ಮಾಹಿತಿ

— 'ಸಾಲಿಗ್ರಾಮ ಶಿಲಾಯಾಂತು ನಿತ್ಯ ಸನ್ನಿಹಿತೋ ಹರಿಃ' - ಶ್ರೀ ವಿಷ್ಣುವಿನ ನಿತ್ಯ ಸನ್ನಿಧಾನದಿಂದ ಸದಾ ಪವಿತ್ರವಾದುದು ಸಾಲಿಗ್ರಾಮ.

— ಸುದರ್ಶನ ಸಹಿತವಾಗಿ ದೈವದತ್ತವಾಗಿ ಗಂಡಕೀ ನದಿಯಲ್ಲಿ ಪ್ರಾಪ್ತವಾದ ಶಿಲೆಗಳೆ ಸಾಲಿಗ್ರಾಮ. ಇದು ಪರಮ ಪವಿತ್ರವೆನ್ನಿಸಿದೆ.

— ಸಾಲಿಗ್ರಾಮಕ್ಕೆ ಸಾಲಗ್ರಾಮ, ಶಾಲಿಗ್ರಾಮ, ಶಾಲಿಗ್ರಾವ, ಶಾಲಗ್ರಾಮ ಮುಂತಾದ ಹೆಸರುಗಳಿವೆ.

— ನಾಲ್ಕು ಯುಗಗಳಲ್ಲೂ ಸಾಲಿಗ್ರಾಮದ ಪೂಜೆ ಇದೆ. ಎಲ್ಲ ಹಿಂದುಗಳು ವಿಶೇಷವಾಗಿ ತ್ರಿಮತಸ್ಥರೂ ನಿತ್ಯ ಪೂಜಿಸುತ್ತಾರೆ.

— ಸಾಲಿಗ್ರಾಮವಿಲ್ಲದ, ತುಳಸಿ ಇಲ್ಲದ ಮನೆಯನ್ನು ಮನೆ ಎಂದು ಕರೆಯಬಾರದು. ಅಲ್ಲಿ ಏನನ್ನು ಸ್ವೀಕರಿಸಬಾರದು.

— ಸಾಲಿಗ್ರಾಮಗಳ ಪೂಜೆಯ ಮುಂಚೆ ಅದರ ಲಕ್ಷಣಗಳನ್ನು ತಿಳಿದಿರಬೇಕು.

— 12 ಸಾಲಿಗ್ರಾಮಗಳು ಒಟ್ಟಿಗಿದ್ದರೆ ಒಂದು ಕ್ಷೇತ್ರವೆಂದು ಕರೆಯುವರು. ಇದರ ಎಂಟು ಗಾವುದ ಸುತ್ತಳತೆ ಕ್ಷೇತ್ರವೆನಿಸುತ್ತದೆ. ಸಾಲಿಗ್ರಾಮದ ಶಿಲಾಮೂರ್ತಿಗಳಿದ್ದರೂ ಕ್ಷೇತ್ರವೆಂದು ಕರೆಯುವರು.

— ಸಾಲಿಗ್ರಾಮದಲ್ಲಿ ಒಂದು ಚಕ್ರದಿಂದ 25 ಚಕ್ರಗಳವರೆಗೂ ಇರುವುದುಂಟು.

— ವದನವಿಲ್ಲದ ಸಾಲಿಗ್ರಮಗಳಿಗೆ ರತ್ನಗರ್ಭ, ಕುಂಡಲಿನೀ ಮುಂತಾಗಿ ಕರೆಯುವರು.

— ಸುಮಾರು 80 ಸಾಲಿಗ್ರಮಗಳ ಲಕ್ಷಣ ಸಿಗುತ್ತದೆ. ಇದರಲ್ಲಿ ನರಸಿಂಹ ಸಾಲಿಗ್ರಾಮಗಳೇ ಹೆಚ್ಚು

— ಸಾಲಿಗ್ರಾಮ ಗಾತ್ರದಲ್ಲಿ ಚಿಕ್ಕದಾದಷ್ಟು ಶ್ರೇಷ್ಠ ಹೆಚ್ಚಿನಫಲಪ್ರಾಪ್ತಿ

— ಒಂದು ಸಾಲಿಗ್ರಾಮವೂ ಮನೆಯಲ್ಲಿ ಇಲ್ಲವೆಂದಾದಲ್ಲಿ ಆ ಮನೆ ಸ್ಮಶಾನಕ್ಕೆ ಸದೃಶವೆಂದು ಹೇಳಿದೆ.

— ಸಾಲಿಗ್ರಾಮ ಪೂಜೆಮಾಡದ ಬ್ರಾಹ್ಮಣಗೆ ಚಂದ್ರಸೂರ್ಯರಿರುವವರೆಗೂ ನರಕವಾಸ.

— ಸಾಲಿಗ್ರಾಮ ಮಾರುವುದಾಗಲಿ, ಕೊಳ್ಳುವುದಾಗಲಿ ನಿಷಿದ್ಧ. ಇಲ್ಲದಿದ್ದರೆ ದಾನವಾಗಿ ಪಡೆದು ಪೂಜಿಸಬೇಕು

— ಪ್ರತಿದಿನ ಯಾರು ಸಾಲಿಗ್ರಾಮ ಶಿಲೆಯನ್ನು ಮುಟ್ಟಿ ಪೂಜಿಸುವರೋ ಅವರ ಕೈಯನ್ನು ಇಂದ್ರದೇವರೊಂದಿಗೆ ಇತರ ದೇವತೆಗಳು ಮುಟ್ಟಲು ಅಪೇಕ್ಷಿಸುತ್ತಾರೆಂದು ಪುರಾಣ ವಾಕ್ಯ.

— ಸಾಲಿಗ್ರಾಮದಲ್ಲಿ ಭಗವಂತನು 5535 ರೂಪಗಳಿಂದ ಇರುವನು.

— ಮುಷ್ಟಿಯಲ್ಲಿ ಹಿಡಿಯಬಹುದಾದ ಸಾಲಿಗ್ರಾಮಗಳು ಮನೆಯ ಪೂಜೆಗೆ ಶ್ರೇಷ್ಠವಾಗಿದೆ. ಪೂಜಕನ ಎಂಟು ಬೆರಳಷ್ಟು ಅಳತೆಗಿಂತಲೂ ಕಡಿಮೆ ಇರುವುದು ಶ್ರೇಷ್ಠ

— ಸಾಲಿಗ್ರಾಮದ ಬಿಲದ್ವಾರವು ಅದರ ಸುತ್ತಳತೆಯ ಎಂಟನೆಯ ಒಂದು ಭಾಗವಿದ್ದರೆ ಉತ್ತಮ. ನಾಲ್ಕನೆಯ ಒಂದು ಭಾಗವಿದ್ದರೆ ಮಧ್ಯಮ. ಮೂರನೆಯ ಒಂದು ಭಾಗವಿದ್ದರೆ ಸಾಧಾರಣ. ಅರ್ಧವಿದ್ದರೆ ಅಧಮ.

— ಮನೆಯಲ್ಲಿ ಸಾಲಿಗ್ರಾಮವೇ ಇಲ್ಲದ ಪ್ರಸಂಗದಲ್ಲಿ ಸುದರ್ಶನ, ಭಗ್ನ - ಭಿನ್ನ ಸಾಲಿಗ್ರಾಮವನ್ನಾದರೂ ಪಡೆದು ಪೂಜಿಸಬೇಕು.

— ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಶೂದ್ರರಿಗೆ ಸಾಲಿಗ್ರಾಮ ಪೂಜಾಧಿಕಾರವಿದೆ. ಸ್ತ್ರೀಯರಿಗೆ ಅಧಿಕಾರವಿಲ್ಲ.

— ಒಂದು ಕ್ಷೇತ್ರ (12) ಸಾಲಿಗ್ರಾಮ ಪೂಜಿಸುವನ ಪುಣ್ಯ ಅನಂತ. ಇನ್ನು ಹೆಚ್ಚೂ ಇರಬಹುದು.

— ಸಾಲಿಗ್ರಾಮವನ್ನು ದಾನವಾಗಿ ಪಡೆದು (ಇಲ್ಲದಿದ್ದರೂ ಸಹ) ಪೂಜಿಸುವುದೇ ಶ್ರೇಷ್ಠ

— ಬಂಗಾರದ ರೇಖೆಗಳಿದ್ದ ಸಾಲಿಗ್ರಾಮಗಳು ಹಿರಣ್ಯಗರ್ಭ ಎಂದೆನಿಸುವುದು. ಸಾಲಿಗ್ರಾಮವನ್ನು ಕುಲಿಕಿದಾಗ ಒಳಗಿಂದ ಸದ್ದು ಕೇಳಿದರೆ ಭೂಗರ್ಭ ಎನಿಸುವುದು. ದೀಪದ ಬೆಳಕಲ್ಲಿ ಪಾರದರ್ಶಕವಾಗಿ ಒಳ ದೇಹ ಕಂಡರೆ ರತ್ನಗರ್ಭ ಎನಿಸುತ್ತದೆ.

— ಒಂದು ಭಾಗದಲ್ಲಿ ಚಕ್ರವಿದ್ದದ್ದು ಸುದರ್ಶನವಾಗುತ್ತದೆ( ಭಿನ್ನ ಸಾಲಿಗ್ರಾಮವೂ ಇರಬಹುದು) ಎರಡು ಕಡೆಗೂ ಅಂಟಿಕೊಂಡ ರೇಖೆಗಳುಳ್ಳ ಚಕ್ರವಿದ್ದರೆ ಅದು ಮಹಾ ಸುದರ್ಶನ.

— ಸಾಲಿಗ್ರಾಮದಲ್ಲಿಯ ವದನ, ಆಕಾರ ಚಕ್ರಗಳ ಸಂಖ್ಯೆಯಿಂದ ಮಾತ್ರ ಅವು ಯಾವ ಸಾಲಿಗ್ರಾಮವೆಂದು ನಿರ್ಧರಿಸಬೇಕು. ಬಲ್ಲವರಿಂದ ತಿಳಿದು ಪೂಜಿಸಬೇಕು.

— ಸಾಲಿಗ್ರಾಮದ ಬಣ್ಣ ಆಕಾರದಿಂದ ಫಲಾಫಲಗಳ ನಿರ್ಣಯ ಪುರಾಣಗಳಲ್ಲಿ ತಿಳಿಸಿದೆ.

| | | |
|---|---|---|
| ಬಿಳಿ | - | ಪಾಪಹರ, ಸತ್ವಗುಣದಾಯಕ, ಮೋಕ್ಷಪ್ರದ |
| ಹಳದಿ | - | ನೆಮ್ಮದಿ, ಪುತ್ರ ಐಶ್ವರ್ಯಪ್ರದ, ಧನಪ್ರಾಪ್ತಿ |
| ನೀಲಿ | - | ಅನ್ನ, ಶಾಂತಿ, ಸರ್ವಸಿದ್ಧಿ ಪ್ರದ, ಕೀರ್ತಿ, ಸಂಪತ್ತು |
| ಕಪ್ಪು | - | ಕೀರ್ತಿ, ಪುಷ್ಟಿಪ್ರದ, ಸಿದ್ಧಿಪ್ರದ |
| ಕೆಂಪು | - | ಆರೋಗ್ಯ, ರಾಜ್ಯಪ್ರದ |
| ಅತಿ ಕೆಂಪು | - | ರೋಗಪ್ರದ, ಅಶಾಂತಿ |
| ಮಿಶ್ರಬಣ್ಣ | - | ಸುಖದುಃಖ ಮಿಶ್ರಪ್ರದ |
| ಕಪಿಲ | - | ಬ್ರಹ್ಮಚಾರಿಗಳ ಪೂಜೆಗೆ ಯೋಗ್ಯವಾದದ್ದು |
| ಬೂದಿಬಣ್ಣ | - | ಸಿದ್ಧಪ್ರದ (ಯತಿಗಳಿಗೆ ಯೋಗ್ಯ) |
| ನುಣುಪಾಗಿರುವಂತಹವು | - | ಸಿದ್ಧಿಯನ್ನು ಕೊಡುತ್ತದೆ |
| ಚಿಕ್ಕದಾಗಿರುವವು | - | ಅಭೀಷ್ಟಫಲಗಳನ್ನು |
| ತಣ್ಣಗಿರುವದು | - | ಸಂತೋಷ, ಸುಖ |
| ತಾವರೆ ಆಕಾರ | - | ಸೌಭಾಗ್ಯ, ಧನಧಾನ್ಯ |
| ವನಮಾಲಾ ಆಕಾರ | - | ಮೋಕ್ಷದಾಯಕ |
| ಒರಟು, ಕುರೂಪ, ಛಿದ್ರ | - | ಅಭೀಷ್ಟಫಲ ಕೊಡದು |
| ವಿಕಾರ, ತೆಳ್ಳಗೆ, ಅಸ್ಥಿರವಾದವು | - | ನೆಮ್ಮದಿಕೊಡದು, ಅಶಾಂತಿ |
| ಮೇಲೆ ಚಕ್ರ ಚಿನ್ಹೆ | - | ರಾಜಸೂಯಯಾಗ ಫಲ |
| ಮೇಲೆ ಕೆಳಗೆ ವದನ ಉಳ್ಳದ್ದು | - | ವಿಶಿಷ್ಟ ಫಲದಾಯಕ |
| ಅಕ್ಕಪಕ್ಕ ಚಕ್ರ | - | ಸೌಭಾಗ್ಯದಾಯಕ |

ಚಿಕ್ಕದಾಗಿ ಚಿಕ್ಕರಂಧ್ರ, ದುಂಡಾಗಿ ಕೃಷ್ಣ ಬಣ್ಣ - ಸರ್ವ ಅಭೀಷ್ಠ ಸಿದ್ಧಿಪ್ರದ.

ಸಾಲಿಗ್ರಾಮಗಳ ಗುಣಧರ್ಮಗಳನ್ನಾಧರಿಸಿ ಒಂಭತ್ತು ವಿಧವಾಗಿ ವಿಂಗಡಿಸಬಹುದು.

1. **ಪರಿಮಾಣ :** ಸಾಲಿಗ್ರಾಮಗಳ ಅಳತೆ, ರೂಪಗಳು, ಸಾಲಿಗ್ರಾಮದ ಸುತ್ತಳತೆಯ 1/8 ವದನವಿದ್ದರೆ ಉತ್ತಮ. 1/4 ಇದ್ದರೆ ಮಧ್ಯಮ, 1/2 ವಿದ್ದರೆ ಅಧಮ.

2. **ಮೂರ್ತಿ :** 1. ಜಲಜ, 2. ಸ್ಥಳಜ ಮತ್ತು

   3. ಮಥಾ ಎಂದು ಮೂರುವಿಧ.

   **ಜಲಜ** – ನೀರಿನಲ್ಲಿ, ಪರ್ವತಗಳಲ್ಲಿ ಸಿಗುವ ಸಾಲಿಗ್ರಾಮಗಳು ಉತ್ತಮ ಹಾಗೂ ಪೂರ್ಣಫಲಪ್ರದ ಹೆಚ್ಚಾಗಿ ಕಪ್ಪು ಕಂದು ಬಣ್ಣದ್ದಾಗಿರುತ್ತವೆ.

   **ಮಥಾ** – ಇವು ಪಳೆಯುಳಿಕೆಗಳು. ಒಳಚಕ್ರವು ಒಂದೇ ರೀತಿಯಾಗಿರಲು ಸಾಮಾನ್ಯ ಫಲ.

3. **ಮುದ್ರೆ :** ಸಾಲಿಗ್ರಾಮಗಳ ಮೇಲೆ ನಾನಾರೀತಿಯ ಮುದ್ರೆಗಳಿರುತ್ತವೆ. ಇವು ವಿಷ್ಣುವಿನ ಆಯುಧಗಳ ಮುದ್ರೆಗಳೆ ಹೆಚ್ಚು. ಇದರಿಂದ ರೂಪ ಗುರುತಿಸಬಹುದು. ಸಾಲಿಗ್ರಾಮಗಳ ಆಕಾರದಿಂದಲೂ ವಿಷ್ಣುರೂಪಗಳನ್ನು ಹೇಳಬಹುದು.

4. **ಶಿಲಾ :** ನೆಲ್ಲಿಕಾಯಿಯಿಂದ ಮಾವಿನಹಣ್ಣಿನಷ್ಟು ಗಾತ್ರದ ಶಿಲಾ ಸಾಲಿಗ್ರಾಮಗಳಿರುತ್ತವೆ. ಸಣ್ಣದಾದ ಶಿಲಾಮೂರ್ತಿ ಶ್ರೇಷ್ಠವಾದದ್ದು, ದೊಡ್ಡ ಗಾತ್ರದ್ದು ದೇವಾಲಯ ಮಠಗಳಲ್ಲಿರುತ್ತದೆ.

5. **ಚಕ್ರ :** ಸುತ್ತಿನ ದುಂಡಾದ ಗೆರೆಗಳಿಂದ ಉಬ್ಬಿದ ಭಾಗವೇ ಚಕ್ರಗಳು. ಇವು ಸಾಲಿಗ್ರಾಮದ ಒಳಗು, ಹೊರಗೂ ಇರುತ್ತವೆ. ಈ ಚಕ್ರಗಳು ಗಾತ್ರ, ವದನ, ಬಣ್ಣಗಳಿಂದ ವಿಷ್ಣುವಿನ ರೂಪಗಳು ನಿರ್ಣಯವಾಗಿರುತ್ತದೆ. ಚಕ್ರಗಳಿಲ್ಲದ್ದು ಬರಿ ಶಲಾ ಮಾತ್ರ. ಚಕ್ರಗಳು ಬೇರೆ ತರಹವೂ ಇರಬಹುದು.

6. **ಆಸನ :** ಸಾಲಿಗ್ರಾಮಗಳು ಬೇರೆ ಬೇರೆ ಆಕಾರದಲ್ಲಿರುತ್ತವೆ. ವದನವನ್ನೇ ಆಸನವನ್ನಾಗಿಸಿ ಪೂಜೆಗೆ ಇಡಬಾರದು. ಅಭಿಷೇಕಾದಿ ಸಮಯದಲ್ಲಿ ಸಾಲಿಗ್ರಾಮ ಸ್ಥಿರವಾಗಿರುವಂತೆ ಮಾಡುವುದು. ಸರಿಯಾದ ಆಸನ ಸಿಗದಿದ್ದಲ್ಲಿ ಒಂದು ಭಾಗದಲ್ಲಿ ಉಜ್ಜಿ ಸ್ಥಿರಾಸನವನ್ನು ಕಲ್ಪಿಸಬೇಕು.

7. **ಕ್ಷೇತ್ರ :** ಸಾಲಿಗ್ರಾಮವು ಯಾವ ಕ್ಷೇತ್ರದೆಂದು ತಿಳಿದಿರಬೇಕು. ಫಲಾಫಲಗಳು

ಇದನ್ನವಲಂಬಿಸಿದೆ. ಯಾವ ಭಗವದ್ರೂಪವೆಂದು ತಿಳಿಯಬೇಕು. ಯಾವ ಭಾಗದಿಂದ ಬಂದದ್ದೆಂದೂ ತಿಳಿಯಬೇಕು.

8. ವರ್ಣ : ಸಾಲಿಗ್ರಾಮಗಳು ವಿವಿಧ ಬಣ್ಣಗಳಲ್ಲಿರುತ್ತವೆ. ಹೆಚ್ಚಿನವು ಕಪ್ಪು ನೀಲಿ ಬಣ್ಣದ್ದು ಯಾವ ಬಣ್ಣದ್ದಾದರೂ ಶ್ರೇಷ್ಠವೆ. ಕಂದು, ಕೆಂಪು, ಬಿಳಿ, ನೀಲಿ, ಕಪಿಲ ಹೀಗೆ ಬಣ್ಣಗಳಲ್ಲಿ ಸಿಗುತ್ತವೆ. ಸಾಲಿಗ್ರಾಮ ಲಕ್ಷಣಗಳಲ್ಲಿ ಬಣ್ಣವೂ ಮುಖ್ಯವಾದದ್ದಾಗಿದೆ.

9. ಸಾಂದ್ರತೆ : ಇದನ್ನು ಸಾಲಿಗ್ರಾಮಗಳ ತೂಕ ಹಾಗೂ ಗಾತ್ರದ ಮೇಲೆ ನಿರ್ಧರಿಸಲಾಗುವುದು. ಚಿಕ್ಕದಾದ ದುಂಡಾದ ಸಾಲಿಗ್ರಾಮವು ಉತ್ತಮವಾದವು. ಕಡಿಮೆ ತೂಕದ್ದಾಗಿ ಶುದ್ಧವಾದ ವದನದಲ್ಲಿ ಚಕ್ರಗಳಿರುವುದು ಶ್ರೇಷ್ಠ ಸಾಲಿಗ್ರಾಮಗಳು.

## ಸಾಲಿಗ್ರಾಮದ ಪೂಜಾ ವಿಶೇಷ :

— 'ಸಾಲಿಗ್ರಾಮ ಶಿಲಾ ನಿತ್ಯಮ್ ಪೂಜನೀಯಾ ಸದಾ ದ್ವಿಜೈಃ' - ನಿತ್ಯ ಪೂಜೆ ಅತ್ಯಾವಶ್ಯಕ.

— ಸಾಲಿಗ್ರಾಮಕ್ಕೆ ಅಭಿಷೇಕವಾದಾಗ ಮಾತ್ರ ತೀರ್ಥವೆನಿಸಿಕೊಳ್ಳುವುದು.

— ಶ್ರೀ ಹರಿಯ ನಿತ್ಯಸನ್ನಿಧಾನದಿಂದಾಗಿ ಆವಾಹನೆ, ವಿಸರ್ಜನಾದಿಗಳು ಸಾಲಿಗ್ರಾಮಕ್ಕಿಲ್ಲ.

— ಸಾಲಿಗ್ರಾಮದಲ್ಲಿ ಕೆತ್ತಿರುವ ಪ್ರತಿಮೆಗಳಿಗೆ ಆವಾಹನಾದಿಗಳುಂಟು.

— ಬೆಸಸಂಖ್ಯೆಯಲ್ಲಿ ಸಾಲಿಗ್ರಾಮಪೂಜೆ ನಿಷಿದ್ಧ(ಒಂದಕ್ಕೆ ದೋಷವಿಲ್ಲ). ಎರಡು ಅಥವಾ ಮೂರು ಸಾಲಿಗ್ರಾಮ ಪೂಜೆ ನಿಷಿದ್ಧ. ಸಮಸಂಖ್ಯೆಯಲ್ಲಿ ಪೂಜಿಸಬೇಕು.

— ಸಾಲಿಗ್ರಾಮದ ಜೊತೆಯಲ್ಲಿ ದ್ವಾರಕೆಯ ಶಿಲೆಯಾದ ಚಕ್ರಾಂಕಿತೆಯನ್ನು ಇಟ್ಟುಕೊಂಡು ಪೂಜಿಸಬೇಕು.

— ಸಾಲಿಗ್ರಾಮ ರೂಪಗಳನ್ನು ತಪ್ಪಾಗಿ ತಿಳಿದು ಪೂಜಿಸಿದರೂ ಭಗವಂತ ಮನ್ನಿಸುವ.

— ಸಾಲಿಗ್ರಾಮಗಳಿಗೆ ಮಾಡುವ ತುಳಸೀ ಗಂಧಾದಿ ಅರ್ಚನೆಯು ಶ್ರೇಷ್ಠವಾದದ್ದು. ವಿಷ್ಣುಸಹಸ್ರನಾಮ, ಬ್ರಹ್ಮಸೂತ್ರಗಳಿಂದ ಮಾಡುವ ಅರ್ಚನೆ ಅಧಿಕ ಫಲದಾಯಕ.

— ಸಾಲಿಗ್ರಾಮಕ್ಕೆ ಮಾಡುವ ಅಭಿಷೇಕ, ಪಂಚಾಮೃತ, ಷೋಡಶೋಪಚಾರ ಪೂಜೆ, ನೈವೇದ್ಯಾದಿಗಳು ಪ್ರತಿಷ್ಠಿತ ವಿಗ್ರಹಗಳ ಪೂಜೆಗಿಂತಲೂ ಅಧಿಕ ಫಲದಾಯಕ.

— ಸಾಲಿಗ್ರಾಮಗಳ ನಿಷ್ಕಾಮ ಪೂಜೆಯಿಂದ ಮುಕ್ತಿಯೇ ಫಲ. ಸಕಾಮನಾ ಪೂಜೆಯಿಂದ ಧರ್ಮಾರ್ಥಕಾಮ ಸಿದ್ಧಿಯು.

— ಸಾಲಿಗ್ರಾಮಗಳ ರಂಧ್ರ (ವದನ)ದಲ್ಲಿ ಚಕ್ರಗಳಲ್ಲದೆ ಮೇಲೂ ಚಕ್ರಗಳಿರಬಹುದು. ಅಲ್ಲದೆ ಭಗವಂತನ ಶಂಖ, ಚಕ್ರ, ಗದಾ, ಪದ್ಮ, ಇತರ ಗುರುತುಗಳೂ ಇರುವುದುಂಟು.

— ಭಗವಂತನ ವಿಶೇಷಸನ್ನಿಧಾನಕ್ಕೆಂದು ಸಾಲಿಗ್ರಾಮವನ್ನು ಮದುವೆ, ಉಪನಯನ, ಗೃಹಪ್ರವೇಶ, ಯಜ್ಞ, ಶ್ರಾದ್ಧಾದಿ ಪ್ರಸಂಗಗಳಲ್ಲಿ ಇಟ್ಟುಕೊಳ್ಳುವುದು ಪರಂಪರೆಯಲ್ಲಿ ಬಂದಿದೆ.

— ಉಡುಪಿಯ ಕೃಷ್ಣ ಪಾಂಡುರಂಗ, ಬದರೀನಾರಾಯಣ ಹೀಗೆ ಅನೇಕ ವಿಗ್ರಹಗಳು ಸಾಲಿಗ್ರಾಮದ ಶಿಲೆಗಳಾಗಿವೆ. ಈ ಶಿಲೆಗಳಲ್ಲಿ ಕೆತ್ತಿಸಿದ ವಿಗ್ರಹಗಳು ಶ್ರೇಷ್ಠವೆನಿಸುತ್ತವೆ. ಪೂರಿಜಗನ್ನಾಥನ ಮರದ ಮೂರ್ತಿಯ ಹೃದಯದಲ್ಲಿ ಸಾಲಿಗ್ರಾಮವನ್ನಿರಿಸುವರು. ತಿರುಪತಿ ತಿಮ್ಮಪ್ಪನ ಬಳಿಯಲ್ಲಿ ಇಟ್ಟಿರುವರು.

— ಪ್ರತಿಯೊಂದು ವಿಗ್ರಹಗಳ, ವೃಂದಾವನಗಳ ಪ್ರತಿಷ್ಠಾಪನೆಯಲ್ಲೂ ಭಗವಂತನ ವಿಶೇಷ ಸನ್ನಿಧಾನಕ್ಕೆಂದು ಸಾಲಿಗ್ರಾಮಗಳನ್ನು ಇಡುವರು.

— ಸಾಲಿಗ್ರಾಮಗಳು ಭಿನ್ನವಾಗಿದ್ದರೂ, ಬರಿ ಸುದರ್ಶನವಾದರೂ, ತುಂಡಾಗಿದ್ದರೂ ಶ್ರೇಷ್ಠವಾದದ್ದೆ.

— ತೀರ್ಥಯಾತ್ರೆಗಳಿಗೆ ಹೋದಾಗ ನಿಯಮೇನ ಸಾಲಿಗ್ರಾಮವನ್ನು ಕೊಂಡೊಯ್ಯಬೇಕು, ತೀರ್ಥಗಳಲ್ಲಿ ಸ್ನಾನಮಾಡುವಾಗ ತಲೆಯ ಮೇಲಿರಿಸಿಕೊಂಡು ಮುಳುಗು ಹಾಕಬೇಕು.

— ದಾನಗಳಲ್ಲಿ ಸಾಲಿಗ್ರಾಮದಾನ ಶ್ರೇಷ್ಠವಾದದ್ದು, ಅದರಲ್ಲೂ ಪಾತ್ರದೇಶಕಾಲಗಳ ಅನುಸಾರಿಯಾಗಿ ವಿಶೇಷಫಲ ಇರುತ್ತದೆ.

— ಸಾಲಿಗ್ರಾಮಗಳನ್ನು ಅಭಿಷೇಕಾದಿ ಸಮಯದಲ್ಲಿ ಸ್ಥಿರವಾಗಿರುವಂತೆ ಮಾಡಬೇಕು. ಅಲುಗಾಡುತ್ತಿದ್ದರೆ, ಬೀಳುತ್ತಿದ್ದರೆ ಸಫಲಿಸದು. ಈ ಶಿಲೆಗಳಿಗೆ ಆಸನವಿರಬೇಕು.

— ಸಾಲಿಗ್ರಾಮಗಳ ಆಕಾರ, ಬಣ್ಣ, ಹೊಳಪು, ರೂಪ ಮುಂತಾದ ಗುಣಗಳಿಂದ ಅವುಗಳಿಂದಾಗುವ ಫಲಾಫಲ, ಸಿದ್ಧಿಗಳನ್ನು ನಿರ್ಧರಿಸಲಾಗುವದು (ಇದರಲ್ಲಿ ಭಿನ್ನಾಭಿಪ್ರಾಯಗಳೂ ಇವೆ).

— ಬ್ರಾಹ್ಮಣರು–ವಾಸುದೇವ, ಕ್ಷತ್ರಿಯರು–ಸಂಕರ್ಷಣ, ವೈಶ್ಯರು–ಪ್ರದ್ಯುಮ್ನ, ಶೂದ್ರರು–

ಅನಿರುದ್ಧ ಸಾಲಿಗ್ರಾಮಗಳನ್ನು ಪೂಜಿಸುವುದು ಶ್ರೇಷ್ಠ ಶೂದ್ರರು ಒಂದು ಸಾಲಿಗ್ರಾಮ ಮಾತ್ರ. ಬ್ರಾಹ್ಮಣರು ಎಷ್ಟಾದರೂ ಪೂಜಿಸಬಹುದು. (ಇದರಲ್ಲಿ ಭಿನ್ನಾಭಿಪ್ರಾಯ ಗಳಿವೆ).

— ಚಕ್ರಾಕಾರದಲ್ಲಿ ಭೂಮಿಯ ಇತರ ದೇಶಗಳಲ್ಲಿ ಸಿಗುವ ಶಿಲೆಗಳಿಗೆ ಅಮೋನೇಟ್ (ಪಳೆಯುಳಿಕೆ) ಎನ್ನುವರು ಇವು ಪೂಜೆಗೆ ಯೋಗ್ಯವಲ್ಲ. ಇವು ಯಾವ ಬಣ್ಣದ್ದಾಗಿದ್ದರೂ ಪೂಜಿಸಬಹುದು.

**ಗಂಡಕೀನದಿಯ ವಿಶೇಷ :**

— ಗಂಡಕೀ ನದಿಯಲ್ಲಿ ಸಿಗುವ ಸಾಲಿಗ್ರಾಮಗಳು ಮಾತ್ರ ಪರಮ ಪವಿತ್ರವೆನಿಸಿವೆ.

— ಗಂಡಕೀನದಿಗೆ ನಾರಾಯಣೀ, ಹಿರಣ್ಯವತಿ, ಹಿರಣ್ವತೀ, ಗಂಡಕಾನದಿ, ಶಾಲಗ್ರಾಮೀ ಎಂಬ ಹೆಸರುಗಳಿವೆ.

— ಗಂಡಕೀನದಿಯ ಸಾಲಿಗ್ರಾಮವು ಯಾವ ಭಗವದ್ರೂಪದ್ದೇ ಆಗಿರಲಿ, ಯಾವ ವರ್ಣದ್ದೇ ಆಗಿರಲಿ, ಪೂಜಾರ್ಹವಾದುದು. ಇದು ವಿಷ್ಣು ಪ್ರತೀಕವಾಗಿರುತ್ತದೆ.

— ಗಂಡಕೀ ನದಿಯಲ್ಲಿ ಸಾಕ್ಷಾತ್ತಾಗಿ ದೇವತೆಗಳೇ ಇರುವುದರಿಂದ ಇದು ಪವಿತ್ರತಮವಾದ ತೀರ್ಥವೆನಿಸಿದೆ.

— ವಿಷ್ಣುವಿನ ವರದಿಂದ ಗಂಡಕೀನದಿಯಾಯಿತು. ಚತುರ್ಮುಖ ಬ್ರಹ್ಮಾದಿ ದೇವತೆಗಳೆ ಕೀಟಗಳಾಗಿ ಚಕ್ರ ಕೊರೆಯುವರು. ಮಹಾವಿಷ್ಣುವೂ ಶಿಲೆಯಲ್ಲಿ ಕೀಟವಾಗಿ ಕೊರೆಯುವನೆಂದೂ ಉಲ್ಲೇಖವಿದೆ.

— ಗಂಡಕೀನದಿಯ ಹಾಗೂ ಸಾಲಿಗ್ರಾಮಗಳ ಬಗ್ಗೆ 8-10 ಪುರಾಣೋಕ್ತ ಕಥೆಗಳಿವೆ. ಪದ್ಮ, ಅಗ್ನಿ, ಗರುಡ, ಸ್ಕಂಧ, ಬ್ರಹ್ಮವೈವರ್ತ, ಭಾಗವತ, ಮಹಾಭಾರತ, ವಿಷ್ಣುಪುರಾಣ, ನರಸಿಂಹಪುರಾಣ, ಮಾಘಮಾಸಮಾಹಾತ್ಮೆ ಹೀಗೆ ಪುರಾಣಗಳಲ್ಲಿ ಇವುಗಳ ಬಗ್ಗೆ ವಿವರವಾಗಿ ಬಂದಿರುವುದನ್ನು ಅಲ್ಲಿಯೇ ನೋಡಬೇಕು.

— ಕೆಲವು ಸಾಲಿಗ್ರಾಮಗಳಲ್ಲಿ ಬಂಗಾರವಿರುವುದರಿಂದ ಈ ಗಂಡಕೀನದಿಗೆ ಹಿರಣ್ಯವತಿ ಎಂದು ಕರೆಯುವರು.

ಗಂಡಕೀನದಿಯ ಸಾಲಿಗ್ರಾಮವನ್ನು ನಿಷ್ಕಾಮನೆಯಿಂದ ಪೂಜಿಸುವವಗೆ ಯಾವ ನಿರ್ಬಂಧವೂ ಇರದು.

# ವೇದ ವಿಭಾಗ ಹಾಗೂ ಬ್ರಹ್ಮಸೂತ್ರಗಳು

ಅಗಾಧವಾದ ಅನಂತ ವೇದರಾಶಿಯನ್ನು ಸಜ್ಜನರ ಜ್ಞಾನಾರ್ಥಕ್ಕಾಗಿ ಶ್ರೀವೇದವ್ಯಾಸರು ಅದರಲ್ಲಿಯ ಕೆಲಭಾಗಗಳನ್ನು ತೆಗೆದು, ನಾಲ್ಕು ಭಾಗಗಳಾಗಿ ವಿಂಗಡಿಸಿದರು. ಎಲ್ಲವೂ ಭಗವಂತನ ಮಾಹಾತ್ಮ್ಯ ಪಾರಮ್ಯವನ್ನು ಬಣ್ಣಿಸುವ ಶಬ್ಧರಾಶಿಯಾಗಿವೆ.

1. **ಋಗ್ವೇದ -** ಪದ್ಯಭಾಗದಲ್ಲಿ ಪರಮಾತ್ಮನ ಸ್ತೋತ್ರಗಳು.
   24 ಶಾಖೆಗಳಾಗಿ ವಿಂಗಡಿಸಲಾಗಿದೆ.

2. **ಯಜುರ್ವೇದ -** ನಿಗದ ಗದ್ಯಭಾಗ ಕೃಷ್ಣ ಯಜುರ್ವೇದ ಹಾಗೂ ಶುಕ್ಲ ಯಜುರ್ವೇದ
   101 ಶಾಖೆಗಳಾಗಿ ವಿಭಾಗಿಸಲಾಗಿದೆ.

3. **ಸಾಮವೇದ -** ಗಾನರೂಪದಲ್ಲಿ ಹಾಡುವ ಪದ್ಯಭಾಗ.
   1000 ಶಾಖೆಗಳಾಗಿ ವಿಭಾಗ ಮಾಡಲಾಗಿದೆ.

4. **ಅಥರ್ವಣವೇದ -** ಗದ್ಯಪದ್ಯಭಾಗ.
   ಔಷಧಿ, ರೋಗನಿವಾರಣ ಮಂತ್ರಗಳು, ವಿಜ್ಞಾನ ವಿಷಯಗಳು

12 ಶಾಖೆಗಳಲ್ಲಿ ವಿಭಾಗಿಸಲಾಗಿದೆ. ಈ ನಾಲ್ಕು ವೇದಗಳೂ, ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್‌ಗಳೆಂಬ ಭಾಗಗಳುಳ್ಳದ್ದಾಗಿದೆ.

ಈ ನಾಲ್ಕು ವೇದಗಳ ಅರ್ಥನಿರ್ಣಾಯಕಗಳಾಗಿ ವಿವರಣರೂಪದಲ್ಲಿ ಅಧ್ಯಯನಕ್ಕಾಗಿ ಶ್ರೀವೇದವ್ಯಾಸರೆ 564 ಬ್ರಹ್ಮಸೂತ್ರಗಳನ್ನು ರಚಿಸಿದರು. ಇವುಗಳನ್ನು ನಾಲ್ಕು ಅಧ್ಯಾಯದ 16ಪಾದಗಳಲ್ಲಿ ವಿಭಾಗಿಸಿ 222 ಅಧಿಕರಣಗಳಲ್ಲಿ ನಿಯೋಜಿಸಲಾಗಿದೆ.

# ವೇದದ ಷಡಂಗಗಳು

(1) ಶಿಕ್ಷಾ - ಉಚ್ಚಾರಣ ಶಾಸ್ತ್ರ(2) ಕಲ್ಪ - ವೇದೋಕ್ತ ಕರ್ಮಾಚರಣ ನಿಯಮಗಳು (3) ವ್ಯಾಕರಣ - ಶಬ್ದಗಳ ಸಾಧು ಪ್ರಯೋಗ ಶಾಸ್ತ್ರ (4) ನಿರುಕ್ತ - ಶಬ್ದಗಳ ನಿರ್ವಚನೆ (5) ಛಂದಃ ಶಾಸ್ತ್ರ - ಅಕ್ಷರಗಣನೆಯ ವಿವಿಧ ಛಂದಸ್ಸಿನ ಶಾಸ್ತ್ರ (6) ಜ್ಯೋತಿಷ್ಯ - ಗ್ರಹ ನಕ್ಷತ್ರಗಳ, ಚಲನೆ, ಫಲಾಫಲ ನಿರೂಪಣ ಶಾಸ್ತ್ರ

ಬೃಹತೀ ಸಹಸ್ರ : ಋಗ್ವೇದದಲ್ಲಿಯ ಸಹಸ್ರ ಮಂತ್ರಗಳಿಂದ ನಿರ್ಮಾಣಗೊಂಡ ಮಂತ್ರ ಸಮುಚ್ಚಯ. ವಿಷ್ಣುಸಹಸ್ರನಾಮ ಪ್ರತಿಪಾದ್ಯ ಸಹಸ್ರರೂಪಗಳೆ ಈ ಬೃಹತೀ ಸಹಸ್ರದ ಸಾವಿರ ಮಂತ್ರಗಳು.

ಪವಮಾನ ಸೂಕ್ತ : ಋಗ್ವೇದದಲ್ಲಿಯ ಹತ್ತು ಮಂಡಳಗಳಲ್ಲಿ ಒಂಭತ್ತನೆಯ ಪವಮಾನ ಮಂಡಲದಲ್ಲಿರುವುದು. ಇದರಲ್ಲಿ 114 ಸೂಕ್ತಗಳಿದ್ದು 1108 ಮಂತ್ರಗಳುಳ್ಳದ್ದಾಗಿದೆ. ಇದರಲ್ಲಿ 60 ಸೂಕ್ತಗಳು (4 ಅಧ್ಯಾಯ) ಅಂದರೆ 610 ಮಂತ್ರಗಳು ಪವಮಾನ ಹೋಮಕ್ಕೆ ತೆಗೆದುಕೊಳ್ಳಲಾಗಿದೆ. ಪವಮಾನನಾಮಕ ಭಗವಂತ ಪ್ರತಿಪಾದ್ಯ ದೇವತೆ.

ಭಗವಾನ್ ವಿಷ್ಣುವಿನ ಅವತಾರರಾದ ವೇದವ್ಯಾಸರು ರಚಿಸಿದ ಬ್ರಹ್ಮಸೂತ್ರಗಳು ಹಾಗೂ ವಿಭಾಗಗಳು. ಶ್ರೀಮದಾನಂದತೀರ್ಥರು ಅನುಸರಿಸಿದ ಕ್ರಮವೂ ಇದೇಯಾಗಿದೆ.

| ಅಧ್ಯಾಯ | ಪಾದ | ಅಧಿಕರಣ | ಸೂತ್ರ |
|---|---|---|---|
| 1. ಸಮನ್ವಯಾಧ್ಯಾಯ | 1. ನಾಮಪಾದ (ಅನ್ಯತ್ರ ಪ್ರಸಿದ್ಧ) | 12 | 31 |
| | 2. ಲಿಂಗಪಾದ (ಅನ್ಯತ್ರ ಪ್ರಸಿದ್ಧ) | 7 | 32 |
| | 3. ನಾಮಲಿಂಗಪಾದ (ಉಭಯತ್ರ ಪ್ರಸಿದ್ಧ) | 14 | 43 |
| | 4 ನಾಮಲಿಂಗಪಾದ (ಅನ್ಯತ್ರೈವ ಪ್ರಸಿದ್ಧ) | 7 | 29 |
| 2. ಅವಿರೋಧಾಧ್ಯಾಯ | 1. ಯುಕ್ತಿಪಾದ (ವಿರುದ್ಧಶಬ್ದಗಳು) | 11 | 38 |
| | 2. ಸಮಯಪಾದ (ವಿರುದ್ಧಶಬ್ದಗಳು) | 12 | 45 |
| | 3. ಶ್ರುತಿವಿರೋಧಪಾದ (ವಿರುದ್ಧಶಬ್ದಗಳು) | 19 | 53 |
| | 4. ಯುಕ್ತಿ ಸಹಿತ ಶ್ರುತಿ ವಿರೋಧಪಾದ (ಶಬ್ದಗಳು) | 13 | 23 |
| 3. ಸಾಧನಾಧ್ಯಾಯ | 1. ವೈರಾಗ್ಯ ಪಾದ | 20 | 29 |
| | 2. ಭಕ್ತಿಪಾದ | 20 | 42 |
| | 3. ಉಪಾಸನಾಪಾದ | 42 | 68 |
| | 4. ಜ್ಞಾನಪಾದ | 11 | 51 |
| 4. ಫಲಾಧ್ಯಾಯ | 1. ಕರ್ಮನಾಶಪಾದ | 8 | 19 |
| | 2. ಉತ್ಕ್ರಾಂತಿಪಾದ | 10 | 22 |
| | 3. ಮಾರ್ಗಪಾದ (ಬ್ರಹ್ಮಪ್ರಾಪ್ತಿ) | 6 | 16 |
| | 4. ಭೋಗಪಾದ (ಮುಕ್ತಿ) | 11 | 23 |
| | | **222** | **564** |

## ಆಚಾರ್ಯ ಮಧ್ವರ ಹಿಂದಿದ್ದ 21 ದುರ್ಭಾಷ್ಯಕಾರರು

ಭಾರತೀವಿಜಯ ಸಂವಿದಾನಂದ ಬ್ರಹ್ಮಘೋಷ ಜ್ಞಾನಾನಂದ ಉದ್ವರ್ತ ವಿನಯ ರುದ್ರಭಟ್ಟ ವಾಮನ ಯಾದವಪ್ರಕಾಶ ಮಾಧವದಾಸ ಪ್ರಪಂಚ ದ್ರಮಿಡ ಬ್ರಹ್ಮದತ್ತ ಭಾಸ್ಕರ ಪಿಶಾಚ ವೃತ್ತಿಪ್ರಕಾಶ ವಿಜಯಭಟ್ಟ ವಿಷ್ಣುಕ್ರಾಂತ ವಾದೀಂದ್ರ ಸಂಕರ ರಾಮಾನುಜ

22ನೆಯ ವೇದವ್ಯಾಸರಿಗೆ ಸಮ್ಮತವಾದ ಸೂತ್ರಗಳ ಯಥಾರ್ಥ್ಯವನ್ನು ಪ್ರಾಮಾಣಿಕವಾಗಿ ತೋರಿದ ಭಾಷ್ಯಕಾರರು ಶ್ರೀಮದಾನಂದತೀರ್ಥರು.

## ಭಾರತೀಯ ತತ್ವದರ್ಶನಗಳ ವರ್ಗೀಕರಣ (ಒಂದು ವಿಧಾನ) ಹಾಗೂ ವಿವರಗಳು

| ದರ್ಶನ | | ಸೂತ್ರಕಾರರು/ಪ್ರವರ್ತಕರು | ಸೂತ್ರಗಳು | ಭಾಷ್ಯಕಾರರು |
|---|---|---|---|---|
| ವೈದಿಕ(ಆಸ್ತಿಕ) | | | | |
| ನ್ಯಾಯ | ಜರನ್ನೈಯಾಯಿಕ, ನವೀನನ್ನೈಯಾಯಿಕ | ಗೌತಮಋಷಿಗಳು | 531 | ವಾತ್ಸಾಯನ<br>ಉದ್ಯುತಕರ (ವಾರ್ತಿಕಾ) |
| ವೈಶೇಷಿಕ | | ಕಣಾದ | 37 | ಪ್ರಶಸ್ತಪಾದ |
| ಸಾಂಖ್ಯ | ನಿರೀಶ್ವರಸಂಖ್ಯ, ಸೇಶ್ವರಸಾಂಖ್ಯ | ಕಪಿಲಮುನಿ | 537 + 22 | ಈಶ್ವರಕೃಷ್ಣ |
| ಯೋಗ | | ಪತಂಜಲಿಮುನಿ | 195 | ವ್ಯಾಸ |
| ಪೂರ್ವಮೀಮಾಂಸಾ | ಭಾಟ್ಟಮತ, ಗುರುಮತ<br>ಮುರಾರಿಮತ | ಜೈಮಿನಿ ಋಷಿಗಳು | 2644 | ಕುಮಾರಿಲ, ಪ್ರಭಾಕರ<br>ಮುರಾರಿ |
| ಉತ್ತರಮೀಮಾಂಸಾ | ಪ್ರಧಾನ ದರ್ಶನಗಳು<br>ಅದ್ವೈತ, ವಿಶಿಷ್ಟಾದ್ವೈತ<br>ದ್ವೈತ | ವೇದವ್ಯಾಸರು | 564<br>(ವಿಭಿನ್ನತೆ ಇದೆ) | (22 ಭಾಷ್ಯಕಾರರು) ಪ್ರಧಾನ<br>ಶಂಕರ ರಾಮಾನುಜ<br>ಆಚಾರ್ಯಮಧ್ವ |
| ಅವೈದಿಕ (ನಾಸ್ತಿಕ) | | | | |
| ಚಾರ್ವಾಕ(ಲೋಕಾಯತನ) | | ಬೃಹಸ್ಪತ್ಯಾಚಾರ್ಯ | – | |
| ಬೌದ್ಧ | ಹೀನಾಯಾನ | ಗೌತಮಬುದ್ಧ | – | ವಿಭಾಗ: ವೈಭಾಷಿಕ, ಸಾಂತ್ರಾಂತಿಕ |
| | ಮಹಾಯಾನ | | – | ಯೋಗಾಚಾರ, ಮಾಧ್ಯಮಿಕ |
| ಜೈನ | ಶ್ವೇತಂಬರ<br>ದಿಗಂಬರ | ವೃಷಭ<br>(24 ತೀರ್ಥಂಕರರು) | – | ಪಾರ್ಶ್ವನಾಥ<br>ವರ್ಧಮಾನ |

# ಶ್ರೀಮದಾನಂದತೀರ್ಥರ ದಶೋಪನಿಷತ್‌ಭಾಷ್ಯೋಕ್ತ ಋಷಿದೇವತಾ ವಿವರ

| ಉಪನಿಷತ್ | ಋಷಿ | ಪ್ರತಿಪಾದ್ಯದೇವತೆ | ವೇದಶಾಖೆ |
|---|---|---|---|
| ಈಶಾವಾಸ್ಯ | ಸ್ವಾಯಂಭುವಮನು | ಯಜ್ಞ | ಶುಕ್ಲಯಜುರ್ವೇದ (ವಾಜಸನೇಯ ಸಂಹಿತಾ) |
| ತಲವಕಾರ | ಬ್ರಹ್ಮ ಮತ್ತು ಶಿವ | ವಿಷ್ಣು | ಸಾಮವೇದ (ತಲವಕಾರ ಬ್ರಾಹ್ಮಣ) |
| ಕಠೋಪನಿಷತ್ | ಯಮ | ವಾಮನ | ಕೃಷ್ಣಯಜುರ್ವೇದ (ತೈತ್ತಿರೀಯ ಸಂಹಿತಾ) |
| ಷಟ್ಪ್ರಶ್ನ | ಪಿಪ್ಪಲಾದಾದಿಗಳು | ವಾಸುದೇವ | ಅಥರ್ವಣವೇದ (ಪಿಪ್ಪಲಾದಶಾಖ) |
| ಆಥರ್ವಣ | ಬ್ರಹ್ಮ ಮತ್ತು ಅಥರ್ವಣರು | ವಿಷ್ಣು (ಅಕ್ಷರನಾಮಕ) | ಅಥರ್ವಣವೇದ |
| ಮಾಂಡೂಕ | ಮಂಡೂಕರೂಪಿ ವರುಣ | ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ | ಅಥರ್ವಣವೇದ |
| ತೈತ್ತಿರೇಯ | ವಿಷ್ಣು, ಬ್ರಹ್ಮ ವರುಣ, ಭೃಗು | ಹರಿ (ಸೂರ್ಯ ಮಂಡಲಸ್ಥ) (ವಾಸುದೇವಾದಿ ಪಂಚರೂಪಗಳು) | ಕೃಷ್ಣಯಜುರ್ವೇದ ತೈತ್ತಿರೀಯಾರಣ್ಯಕ |
| ಐತರೇಯ | ಐತರೇಯ | ಐತರೇಯ | ಋಗ್ವೇದ (ಐತರೇಯಾರಣ್ಯಕ) |
| ಛಾಂದೋಗ್ಯ | ಹಯಗ್ರೀವ, ರಮಾ ಬ್ರಹ್ಮಾದಿಗಳು | ಲಕ್ಷ್ಮೀಪತಿ | ಸಾಮವೇದ (ಛಾಂದೋಗ್ಯಬ್ರಾಹ್ಮಣ) |
| ಬೃಹದಾರಣ್ಯಕ | ಬ್ರಹ್ಮ, ಸೂರ್ಯ, ಮತ್ತು ಕಣ್ವ | ಲಕ್ಷ್ಮೀಶ | ಶುಕ್ಲಯಜುರ್ವೇದ (ಕಣ್ವಶಾಖಾ) |

# ಶ್ರೀಮದಾಚಾರ್ಯ ಮಧ್ವರ ಸರ್ವಮೂಲಗ್ರಂಥಗಳ ವಿವರ

**ಶ್ರುತಿ ಪ್ರಸ್ಥಾನ**

1. ಋಗ್ಭಾಷ್ಯ

**ಸೂತ್ರಪ್ರಸ್ಥಾನ**

2. ಬ್ರಹ್ಮಸೂತ್ರಭಾಷ್ಯ
3. ಅಣುಭಾಷ್ಯ
4. ಅನುವ್ಯಾಖ್ಯಾನ
5. ನ್ಯಾಯವಿವರಣ

**ಗೀತಾ ಪ್ರಸ್ಥಾನ**

6. ಗೀತಾಭಾಷ್ಯ
7. ಗೀತಾತಾತ್ಪರ್ಯ

**ಉಪನಿಷತ್ ಪ್ರಸ್ಥಾನ**

8. ಈಶಾವಾಸ್ಯೋಪನಿಷದ್ಭಾಷ್ಯ
9. ತಲವಕಾರೋಪನಿಷದ್ಭಾಷ್ಯ
10. ಕಾಠಕೋಪನಿಷದ್ಭಾಷ್ಯ
11. ಷಟ್ಪ್ರಶ್ನೋಪನಿಷದ್ಭಾಷ್ಯ
12. ಅಥರ್ವಣೋಪನಿಷದ್ಭಾಷ್ಯ
13. ಮಾಂಡೂಕೋಪನಿಷದ್ಭಾಷ್ಯ
14. ತೈತ್ತಿರೀಯೋಪನಿಷದ್ಭಾಷ್ಯ
15. ಮಹೈತರೇಯೋಪನಿಷದ್ಭಾಷ್ಯ
16. ಛಾಂದೋಗ್ಯೋಪನಿಷದ್ಭಾಷ್ಯ
17. ಬೃಹದಾರಣ್ಯಕೋಪನಿಷದ್ಭಾಷ್ಯ

**ಇತಿಹಾಸ ಪ್ರಸ್ಥಾನ**

18. ಮಹಾಭಾರತ ತಾತ್ಪರ್ಯ ನಿರ್ಣಯ
19. ಯಮಕ ಭಾರತ

**ಪುರಾಣ ಪ್ರಸ್ಥಾನ**

20. ಭಾಗವತ ತಾತ್ಪರ್ಯ ನಿರ್ಣಯ

**ಆಚಾರ ಗ್ರಂಥಗಳು**

21. ಸದಾಚಾರ ಸ್ಮೃತಿ
22. ಕೃಷ್ಣಾಮೃತ ಮಹಾರ್ಣವ
23. ತಂತ್ರಸಾರ ಸಂಗ್ರಹ
24. ಯತಿಪ್ರಣವಕಲ್ಪ
25. ಜಯಂತೀ ನಿರ್ಣಯ

**ಪ್ರಕರಣ ಗ್ರಂಥಗಳು**

26. ತತ್ತ್ವಸಂಖ್ಯಾನ
27. ತತ್ತ್ವವಿವೇಕ
28. ಪ್ರಮಾಣಲಕ್ಷಣ
29. ಕಥಾಲಕ್ಷಣ
30. ಉಪಾಧಿಖಂಡನ
31. ಮಾಯಾವಾದ ಖಂಡನ
32. ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ
33. ತತ್ತ್ವೋದ್ಯೋತ
34. ವಿಷ್ಣುತತ್ತ್ವನಿರ್ಣಯ
35. ಕರ್ಮನಿರ್ಣಯ

**ಸ್ತೋತ್ರ ಗ್ರಂಥಗಳು**

36. ನಖಸ್ತುತಿ
37. ದ್ವಾದಶಸ್ತೋತ್ರ

ಇತರ ಗ್ರಂಥಗಳು★

---

ಸರ್ವಮೂಲವೆಂದೇ ಪ್ರಸಿದ್ಧವಾದ ಮುವ್ವತ್ತೇಳು ಗ್ರಂಥಗಳಲ್ಲದೆ ಶ್ರೀಮದಾಚಾರ್ಯರು ಅನೇಕ ಗ್ರಂಥಕರ್ತರು. ಕಂದುಕಸ್ತುತಿ, ಬಿಲ್ವಮಂಗಲಃ ಸಾಧುಃ, ಧಾಧಾತು ವ್ಯಾಖ್ಯಾನ, ತಿಥಿನಿರ್ಣಯ, ನ್ಯಾಸಪದ್ಧತಿ, ಸಾರಭೋಗಪ್ರಕಾರ, ಬಿಡಿ ಶ್ಲೋಕಗಳು ಹೀಗೆ ಇತರ ಕೃತಿಗಳು ಉಪಲಬ್ಧವಿದೆ.

# ತತ್ತ್ವಗಳ ವಿಂಗಡನೆ (ಆಚಾರ್ಯ ಮಧ್ವರ ತತ್ತ್ವಸಂಖ್ಯಾನೋಕ್ತ)



- ಪ್ರಮಾಣಮ್ (ಯಥಾರ್ಥಂ ಪ್ರಮಾಣಮ್)
  - I. ಕೇವಲಪ್ರಮಾಣಂ (ಯಥಾರ್ಥಜ್ಞಾನಂ)
    - (1) ಈಶ್ವರಜ್ಞಾನಂ
    - (2) ಲಕ್ಷ್ಮೀಜ್ಞಾನಂ
    - (3) ಯೋಗಿಜ್ಞಾನಂ
      - ಋಜುಯೋಗಿಜ್ಞಾನಂ
        - ಸ್ವರೂಪಂ
        - ಮನೋವೃತ್ತಿರೂಪಂ
      - ತಾತ್ವಿಕಯೋಗಿಜ್ಞಾನಂ
        - ಸ್ವರೂಪಂ
        - ಬಾಹ್ಯಂ (ಮನೋವೃತ್ತಿರೂಪಂ)
      - ಅತಾತ್ವಿಕಯೋಗಿಜ್ಞಾನಂ
        - ಸ್ವರೂಪಂ
        - ಬಾಹ್ಯಂ
    - (4) ಅಯೋಗಿಜ್ಞಾನಂ
      - ಮುಕ್ತಿಯೋಗ್ಯಾಃ
        - ಸ್ವರೂಪಂ
        - ಬಾಹ್ಯಂ
      - ನಿತ್ಯಸಂಸಾರಿಣಃ
        - ಸ್ವರೂಪಂ
        - ಬಾಹ್ಯಂ
      - ತಮೋಯೋಗ್ಯಾಃ
        - ಸ್ವರೂಪಂ
        - ಬಾಹ್ಯಂ
  - II. ಅನುಪ್ರಮಾಣಂ



II. ಅನುಪ್ರಮಾಣಂ (ಯಥಾರ್ಥಜ್ಞಾನಂಸಾಧನಂ)
ಪ್ರತ್ಯಕ್ಷಂ
ಅನುಮಾನಂ
ಆಗಮಃ
ಈಶ್ವರಪ್ರತ್ಯಕ್ಷ
ಲಕ್ಷ್ಮೀಪ್ರತ್ಯಕ್ಷ
ಯೋಗಿಪ್ರತ್ಯಕ್ಷ
ಅಯೋಗಿಪ್ರತ್ಯಕ್ಷ
ಪೌರುಷೇಯಃ
ಅಪೌರುಷೇಯಃ
ಸ್ವರೂಪಂ
ಬಾಹ್ಯಂ
ಸ್ವರೂಪಂ
ಬಾಹ್ಯಂ
ಉತ್ತಮಾನಾಂ
ಅಧಮಾನಾಂ
ಮಧ್ಯಮಾನಾಂ
ದೈವಂ
ಆಸುರಂ
ಮಧ್ಯಮಂ
ಕಾರ್ಯಾನುಮಾನಂ
ಕಾರಣಾನುಮಾನಂ
ಅಕಾರ್ಯಕಾರಣಾನುಮಾನಂ
ಸಾಧನಾನುಮಾನಂ
ದೂಷಣಾನುಮಾನಂ
ಸ್ವಾರ್ಥಂ
ಪರಾರ್ಥಂ
ದುಷ್ಟಪ್ರಮಿತಿಸಾಧನಂ
ತರ್ಕಃ

# ಪುರಾಣ ಪ್ರಪಂಚ

ಅನಾದಿನಿತ್ಯನಾದ ಭಗವಂತನ, ಹಿಂದಿನ ಕಾಲಕ್ಕೆ ಸಂಬಂಧಿಸಿದ, ಭವಿಷ್ಯದ, ಅನಂತ ಜೀವರ ವಿಷಯಗಳನ್ನು ತಿಳಿಸಿಕೊಡುವ ಗ್ರಂಥರಾಶಿಯೆ ಪುರಾಣಗಳು. ಎಲ್ಲ ಯುಗಗಳಲ್ಲೂ ಪ್ರಚಲಿತದಲ್ಲಿರುವ ನಿತ್ಯಾನಿತ್ಯವಾದ ವಸ್ತುವು.

**ಪುರಾಣಗಳ 5 ಲಕ್ಷಣ : ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶಾನುಚರಿತಂ ಚೈವ ಪುರಾಣಂ ಪಂಚಕಲಕ್ಷಣಮ್॥ -ವಿಷ್ಣು ಪುರಾಣ**

ಸರ್ಗ (ಸೃಷ್ಟಿ), ಪ್ರತಿಸರ್ಗ (ಪ್ರತಿಸೃಷ್ಟಿ), ವಂಶ (ಸೂರ್ಯಚಂದ್ರಾದಿ), ಮನ್ವಂತರ (ಸ್ವಾಯಂಭುವಾದಿ) ವಂಶಾನುಚರಿತ. ಪುರಾಣಗಳ ಐದು ಲಕ್ಷಣ.

**ಪುರಾಣಗಳ 10 ಲಕ್ಷಣ :** ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥಾ, ಹೇತು ಮತ್ತು ಅಪಾಶ್ರಯ.

18 ಪುರಾಣಗಳನ್ನು 18 ಉಪಪುರಾಣಗಳನ್ನು ಸಜ್ಜನರ ಮೇಲಿನ ಕರುಣೆಯಿಂದ ರಚಿಸಿಕೊಟ್ಟವರು ಮಹಾವಿಷ್ಣುವಿನ ಅವತಾರರಾದ ಶ್ರೀ ವೇದವ್ಯಾಸರು ಮಹರ್ಷಿಗಳು.

**ಅಷ್ಟಾದಶ ಪುರಾಣಗಳು : ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವ ಚತುಷ್ಟಯಮ್ ।**
**ಅನಾಪಲಿಂಗಕೂಸ್ಕಾನಿ ಪುರಾಣಾನಿ ಪೃಥಕ್ ಪೃಥಕ್ ॥**

18 ಪುರಾಣಗಳನ್ನು ಸಾತ್ವಿಕ-ರಾಜಸ-ತಾಮಸ ಪುರಾಣಗಳೆಂದು ವಿಂಗಡಿಸಲಾಗಿದೆ.

**ಸಾತ್ವಿಕ ಪುರಾಣಗಳು-6 : ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ ।**
**ಗಾರುಡಂ ಚ ತಥಾ ಪಾದ್ಮಂ ವರಾಹಂ ಶುಭದರ್ಶನೇ ।**
**ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿವೈ ॥**

| | |
|---|---|
| ವಿಷ್ಣುಪುರಾಣ - 23,000 | ನಾರದೀಯ ಪುರಾಣ - 25,000 |
| ಶ್ರೀಮದ್ಭಾಗವತ ಪುರಾಣ - 18,000 | ಗರುಡ ಪುರಾಣ - 19,000 |
| ಪದ್ಮ ಪುರಾಣ - 55,000 | ವರಾಹ ಪುರಾಣ - 24,000 |

**ರಾಜಸ ಪುರಾಣಗಳು - 6 : ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಾಂಡೇಯಂ ತಥೈವ ಚ ।**
**ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧಮೇ ॥**

| | |
|---|---|
| ಬ್ರಹ್ಮಾಂಡ ಪುರಾಣ - 12,000 | ಬ್ರಹ್ಮವೈವರ್ತ ಪುರಾಣ - 18,000 |
| ಮಾರ್ಕಂಡೇಯ ಪುರಾಣ - 9,000 | ಭವಿಷ್ಯ ಪುರಾಣ - 14,500 |
| ವಾಮನ ಪುರಾಣ - 10,000 | ಬ್ರಹ್ಮ ಪುರಾಣ - 10,000 |

**ತಾಮಸ ಪುರಾಣಗಳು-6: ಮಾತ್ಸ್ಯಂ ಕೌರ್ಮಂ ತಥಾ ಲಿಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥**

ಮತ್ಸ್ಯಪುರಾಣ - 14,000 ಕೂರ್ಮಪುರಾಣ - 17,000
ಲಿಂಗಪುರಾಣ - 11,000 ಶಿವಪುರಾಣ - 24,000
ಸ್ಕಂದ ಪುರಾಣ 81,100 ಅಗ್ನಿ ಪುರಾಣ - 15,400

(ಮೇಲಿನ ಸಂಖ್ಯೆಗಳು ಗ್ರಂಥಗಳು, ಒಂದು ಗ್ರಂಥವೆಂದರೆ 32 ಅಕ್ಷರಗಳ ಶ್ಲೋಕ)

**ಪುರಾಣ ನಾಮಗಳ ಪಠಣದಿಂದ ಪುಣ್ಯಫಲ.**

**ಅಷ್ಟಾದಶ ಪುರಾಣಾನಾಂ ನಾಮಧೇಯಾನಿ ಯಃ ಪಠೇತ್ ।**
**ತ್ರಿಸಂಧ್ಯಂ ಜಯತೇ ನಿತ್ಯಂ ಸೋಽಶ್ವಮೇಧ ಫಲಂ ಲಭೇತ್ ॥**

ಪುರಾಣಗಳ ನಾಮಗಳನ್ನೂ ಮೂರುಕಾಲದಿ ಪಠಣಮಾತ್ರದಿ ಸರ್ವತ್ರಜಯ ಅಲ್ಲದೆ ಅಶ್ವಮೇಧಯಾಗ ಫಲ ಲಭ್ಯವು.

**18 ಉಪಪುರಾಣಗಳು :**

ಸನತ್ಕುಮಾರ, ನರಸಿಂಹ, ನಂದಿ, ದುರ್ವಾಸ, ನಾರದೀಯ, ಕಪಿಲ, ಮಾನವ, ಔಶನಸ, ಬ್ರಹ್ಮಾಂಡ, ವಾರುಣ, ಕಾಲಿಕಾ, ಮಾಹೇಶ, ಸಾಂಬ, ಸೌರ, ಪರಾಶರ, ಮಾರೀಚ, ಭಾರ್ಗವ, ಕೌಮಾರ. (ಉಪಲಬ್ಧ ಇತರ ನಾಮಗಳು- ಶಾಂಬರ, ಆದಿತ್ಯ, ಕೌಶಿಕ, ವಾಯವ್ಯ, ವಾಸಿಷ್ಠ ಶಿವಧರ್ಮ ಮುಂತಾದವು ).

ಎಲ್ಲ ಪುರಾಣಗಳಲ್ಲೂ ಹರಿಸರ್ವೋತ್ತಮತ್ವವನ್ನೇ ಪ್ರತಿಪಾದಿಸಿದರೂ ರಾಜಸ, ತಾಮಸ ಪುರಾಣಗಳಲ್ಲಿ ಮೇಲ್ನೋಟಕ್ಕೆ ಭಿನ್ನತೆ ಕಾಣುತ್ತದೆ. ಇಲ್ಲಿಯೂ ದರ್ಶನ, ಗುಹ್ಯ ಹಾಗೂ ಸಮಾಧಿ ಭಾಷೆಯ ಬಳಕೆ ಇರುತ್ತದೆ. ಭಗವಂತ ವಿಶೇಷವಾಗಿ ವೇದಾಧಿಕಾರಿಗಳಲ್ಲದವರಿಗಾಗಿ, ಸಜ್ಜನ ಸಮುದಾಯಕ್ಕೆ ಉದ್ಧಾರವಾಗಲೆಂದು ಕರುಣೆಯಿಂದ ಅಷ್ಟಾದಶ ಪುರಾಣಗಳನ್ನು ಉಪಪುರಾಣ ಗಳನ್ನು ರಚಿಸಿದ. ಇವು ವೇದಾರ್ಥಸಾರರೂಪವಾಗಿ, ವೇದ-ವೇದಾಂಗಗಳ ತತ್ವಗಳ ನಿದರ್ಶನ ರೂಪವಾಗಿ, ಭಗವಂತನ ಹಾಗೂ ಭಗದ್ಭಕ್ತರ ಮಹಿಮೆಗಳನ್ನೂ ಸಾರುವ ಗ್ರಂಥರಾಶಿಯಾಗಿದೆ.

ಶ್ರೀ ವೇದವ್ಯಾಸ ಮಹಾಭಾರತ : ಪುರಾಣಗಳನ್ನು ರಚಿಸಿದ ಶ್ರೀ ಮನ್ನಾರಾಮಣನ ಅವತಾರರಾದ ವೇದವ್ಯಾಸರೇ ಶ್ರೀ ಮನ್ಮಹಾಭಾರತವನ್ನೂ ರಚಿಸಿದರು. ಇದು ಸಕಲ ವೇದಗಳಿಗೂ ಮಿಗಿಲಾಗಿ ಪಂಚಮವೇದವೆನಿಸಿದೆ. ನಿರ್ಣಯ ಶಾಸ್ತ್ರಗಳಲ್ಲಿ ಅತಿ ಶ್ರೇಷ್ಠವಾಗಿದೆ. ಇಲ್ಲಿ ಎಲ್ಲವೂ ಇದೆ. ಇಲ್ಲಿಲ್ಲದ್ದು ಬೇರೆಲ್ಲೂ ಇರದು. 18 ಪರ್ವಗಳು -1 ಲಕ್ಷ ಶ್ಲೋಕಗಳಿಂದ ಕೂಡಿದ ಜಗತ್ತಿನ ಏಕೈಕ ಉದ್ಗ್ರಂಥ. ಈ ಮಹಾಭಾರತವು ದೇವಲೋಕದಲ್ಲಿ 80 ಲಕ್ಷ ಶ್ಲೋಕಗಳು, ಪಿತೃ ಲೋಕದಲ್ಲಿ - 15 ಲಕ್ಷ , ಗಂಧರ್ವ ಲೋಕದಲ್ಲಿ - 14 ಲಕ್ಷ ಭೂಲೋಕದಲ್ಲಿ - 1 ಲಕ್ಷ ಶ್ಲೋಕಗಳಿದ್ದು ಪ್ರಚಾರದಲ್ಲಿದೆ. (ಈಗಿನ ಮಹಾಭಾರತದಲ್ಲಿ ಉಪಲಬ್ಧ ಶ್ಲೋಕಗಳು - 96, 535 ಮಾತ್ರ).

# ಮಹಾಭಾರತ ಪರ್ವಗಳ ವಿವರ

| ಪರ್ವದ ಹೆಸರು | | ಒಳ ಪರ್ವಗಳು | ಅಧ್ಯಾಯಗಳು | ಶ್ಲೋಕಗಳು |
|---|---|---|---|---|
| 1. | ಆದಿಪರ್ವ | 19 | 260 | 10,889 |
| 2. | ಸಭಾಪರ್ವ | 8 | 103 | 4,367 |
| 3. | ವನಪರ್ವ | 21 | 315 | 12,476 |
| 4. | ವಿರಾಟಪರ್ವ | 5 | 78 | 3,494 |
| 5. | ಉದ್ಯೋಗ ಪರ್ವ | 10 | 196 | 6,753 |
| 6. | ಭೀಷ್ಮಪರ್ವ | 4 | 122 | 5,809 |
| 7. | ದ್ರೋಣಪರ್ವ | 8 | 203 | 10,012 |
| 8. | ಕರ್ಣ ಪರ್ವ | 1 | 101 | 4,975 |
| 9. | ಶಲ್ಯ ಪರ್ವ | 3 | 66 | 3,596 |
| 10. | ಸೌಪ್ತಿಕಪರ್ವ | 2 | 18 | 815 |
| 11. | ಸ್ತ್ರೀ ಪರ್ವ | 3 | 27 | 807 |
| 12. | ಶಾಂತಿ ಪರ್ವ | 3 | 375 | 15,151 |
| 13. | ಅನುಶಾಸನ ಪರ್ವ | 2 | 272 | 11,194 |
| 14. | ಅಶ್ವಮೇ—ಕ ಪರ್ವ | 3 | 118 | 4,555 |
| 15. | ಆಶ್ರಮವಾಸಿಕ ಪರ್ವ | 3 | 41 | 1098 |
| 16. | ಮೌಸಲ ಪರ್ವ | 1 | 9 | 301 |
| 17. | ಮಹಾಪ್ರಸ್ಥಾನ ಪರ್ವ | 1 | 3 | 111 |
| 18. | ಸ್ವರ್ಗಾರೋಹಣ ಪರ್ವ | 1 | 5 | 232 |
| | | **98** | **2,312** | **(1,00,000)** |

**(ಈಗ ಉಪಲಬ್ಧವಿರುವ ಶ್ಲೋಕಗಳ ಸಂಖ್ಯೆ – 96535)**

# ಶ್ರೀವಾಲ್ಮೀಕಿಪ್ರಣೀತ ರಾಮಾಯಣ

| | | ಸರ್ಗಗಳು | ಶ್ಲೋಕಗಳು |
|---|---|---|---|
| 1. | ಬಾಲಕಾಂಡ | 77 | 2277 |
| 2. | ಅಯೋಧ್ಯಾಕಾಂಡ | 119 | 4091 |
| 3. | ಅರಣ್ಯಕಾಂಡ | 75 | 2457 |
| 4. | ಕಿಷ್ಕಿಂದಾಕಾಂಡ | 67 | 2480 |
| 5. | ಸುಂದರಕಾಂಡ | 68 | 2842 |
| 6. | ಯುದ್ಧಕಾಂಡ | 131 | 5836 |
| 7. | ಉತ್ತರಕಾಂಡ | 111 | 4017 |
| | | **648** | **24,000** |

# ಪಾಂಡವರು - ಕೌರವರು

ಪಾಂಡುರಾಜನ ಕುಂತಿ-ಮಾದ್ರಿಯರಲ್ಲಿ ಜನಿಸಿದ ಧರ್ಮಿಷ್ಠರಾದ **ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ, ಸಹದೇವ** ಪಂಚ ಪಾಂಡವರ ಜೊತೆಗೆ ಪಾಪಿಷ್ಠರಾದ ನೂರು ಮಂದಿ ಧೃತರಾಷ್ಟ್ರ ಹಾಗೂ ಗಾಂಧಾರಿಯ ಪುತ್ರರು. ಕೌರವರೂ ಪಾಂಡವರ ಜ್ಞಾತಿಗಳಾಗಿ ಜನಿಸಿದರು. ಅವರ ಹೆಸರುಗಳನ್ನು ಮಹಾಭಾರತ ಈ ರೀತಿ ನಿರೂಪಿಸುತ್ತದೆ.

| | | | |
|---|---|---|---|
| ದುರ್ಯೋಧನ | ಯುಯುತ್ಸು | ದುಶ್ಯಾಸನ | ದುಸ್ಸಹ |
| ದುಶ್ಶಲ | ದುರ್ಮುಖ | ವಿವಿಂಶತಿ | ವಿಕರ್ಣ |
| ಜಲಸಂಧ | ಸುಲೋಚನ | ವಿಂದ | ಅನುವಿಂದ |
| ದುರ್ಧರ್ಷ | ಸುಬಾಹು | ದುಷ್ಪ್ರಧರ್ಷಣ | ದುರ್ಮರ್ಷಣ |
| ದುರ್ಮುಖ | ದುಷ್ಕರ್ಣ | ಕರ್ಣ | ಚಿತ್ರ |
| ಉಪಚಿತ್ರ | ಚಿತ್ರಾಕ್ಷ | ಚಿತ್ರಾಂಗದ | ದುರ್ಮದ |
| ದುಷ್ಪ್ರಹರ್ಷ | ವಿವತ್ಸು | ವಿಕಟ | ಸಮ |
| ಊರ್ಣನಾಭ | ಸುನಾಭ | ನಂದ | ಉಪನಂದಕ |
| ಸೇನಾಪತಿ | ಸುಷೇಣ | ಕುಂಡೋದರ | ಮಹೋದರ |
| ಚಿತ್ರಬಾಹು | ಚಿತ್ರವರ್ಮ | ಸುವರ್ಮ | ದುರ್ವಿಮೋಚನ |
| ಅಯೋಬಾಹು | ಮಹಾಬಾಹು | ಚಿತ್ರಚಾಪ | ಸುಕುಂಡಲ |
| ಭೀಮವೇಗ | ಭೀಮಬಲ | ಬಲಾಕಿ | ಬಲವರ್ಧನ |
| ಉಗ್ರಾಯುಧ | ಧೃಡವರ್ಮ | ಭೀಮಶಿರ | ಕನಕಾಯುಧ |
| ಧೃಡಾಯುಧ | ಧೃಡಕ್ಷತ್ರ | ಸೋಮಕೀರ್ತಿ | ಅನೂರಾಧ |
| ಜರಾಸಂಧ | ಧೃಡಸಂಧ | ಸತ್ಯಸಂಧ | ಸಹಸ್ರವಾಕ್ |
| ಉಗ್ರಶ್ರವ | ಉಗ್ರಸೇನ | ಸೇನಾನಿ | ದುಷ್ಪರಾಜಯ |
| ಅಪರಾಜಿತ | ಪಂಡಿತಕ | ವಿಶಾಲಾಕ್ಷ | ದುರಾಧರ |
| ಧೃಡಹಸ್ತ | ಸುಹಸ್ತ | ವಾತವೇಗ | ಸುವರ್ಚಸ್ |
| ಆದಿತ್ಯಕೇತು | ಬಹ್ವಾಶಿ | ನಾಗದಂತ | ಉಗ್ರಯಾಯಿ |
| ಕವಚಿ | ನಿಷಂಗಿ | ಪಾಶಿ | ದಂಡಧಾರ |
| ಧನುರ್ಗ್ರಹ | ಉಗ್ರ | ಭೀಮರಥ | ವೀರ |
| ವೀರಬಾಹು | ಅಲೋಲುಪ | ಅಭಯ | ರೌದ್ರಕರ್ಮ |
| ಧೃಡರಥ | ಅನಾಧೃಷ್ಯ | ಕುಂಡಭೇದಿ | ವಿರಾವಿ |
| ಧೀರ್ಘಲೋಚನ | ಧೀರ್ಘಬಾಹು | ಮಹಾಬಾಹು | ವ್ಯೋಢೂರು |
| ಕನಕಧ್ವಜ | ಕುಂಡಾಶಿ | ವಿರಜಾ | ದುಶ್ಶಲಾ (ಪುತ್ರಿ) |

ಯುಯುತ್ಸು (ವೈಶ್ಯಾಪುತ್ರ)

# ಮಹಾಭಾರತದ ಮುಖ್ಯಪಾತ್ರಗಳ ಗುಣಧರ್ಮ

ಮಹಾಭಾರತ ಬರಿ ಇತಿಹಾಸವಾಗದೆ ಆಧ್ಯಾತ್ಮಿಕ ಚಿಂತನೆಯ ಚರಿತೆಯಾಗಿದೆ. ಶ್ರೀಕೃಷ್ಣ ಸರ್ವೋತ್ತಮತ್ವವನ್ನು ವಾಯುಜೀವೋತ್ತಮತ್ವವನ್ನು ಸಾರುವ ವೇದಸಾರವಾಗಿದೆ. ಶ್ರೀವೇದ ವ್ಯಾಸರು ಭಗವದ್ಗೀತೆ, ವಿಷ್ಣುಸಹಸ್ರನಾಮಗಳನ್ನು ಸೇರಿಸಿ ವಿದ್ಯಾಸಾಗರವನ್ನಾಗಿಸಿರುವರು. ಇಲ್ಲಿಲ್ಲದ್ದು ಬೇರೆಲ್ಲೂ ಇರದು. ಸಿಗದು. ವೇದಗಳಿಗೂ ಮಿಗಿಲಾಗಿ, ತತ್ತ್ವಗಳ ಸಿರಿಯಾಗಿ, ಸಕಲ ಶಾಸ್ತ್ರಗಳ ಆಕರವಾಗಿ, ಪುರುಷಾರ್ಥಪ್ರದವಾಗಿ, ಹತ್ತಕ್ಕೂ ಹೆಚ್ಚಿನ ಅರ್ಥವಿದ್ದು ಜಯ ವೆಂದೆನಿಸಿ ಒಂದು ಲಕ್ಷಗ್ರಂಥಾತ್ಮಕವಾಗಿ ರಾರಾಜಿಸಿದೆ. ಇಲ್ಲಿಯ ಪ್ರತಿಪಾತ್ರಗಳೂ ಗುಣಗಳಿಗೆ ಪ್ರತಿನಿಧಿಯಾಗಿ, ಸಾಂಕೇತಿಕವಾಗಿ, ಆಧ್ಯಾತ್ಮಮಯವಾಗಿವೆ. ಸಂಗ್ರಹವಾಗಿ ಇದನ್ನು ನೋಡಬಹುದು.

1. ಶ್ರೀಕೃಷ್ಣ - ಸರ್ವೋತ್ತಮ, ಸರ್ವಪ್ರೇರಕ, ಸರ್ವನಿಯಾಮಕ, ಸೂತ್ರಧಾರಿ.
2. ಧರ್ಮರಾಜ - ಧರ್ಮದ ಪ್ರತಿನಿಧಿ
3. ಭೀಮಸೇನ - ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ ಈ ಹತ್ತುಗುಣಗಳನ್ನು ಪ್ರತಿನಿಧಿಸುತ್ತದೆ.
4. ಅರ್ಜುನ - ಶ್ರವಣ, ಮನನ, ನಿಧಿಧ್ಯಾಸನ
5. ನಕುಲ - ಶೀಲ
6. ಸಹದೇವ - ವಿನಯ
7. ದ್ರೌಪದೀ - ಸರ್ವವಿದ್ಯಾ ಹಾಗೂ ಸಮ್ಯಕ್ ಜ್ಞಾನಗಳ ಅಧಿದೇವತೆ
   1. ದುರ್ಯೋಧನ - ಅಜ್ಞಾನದ ಸಂಕೇತ
   2. ದುಃಶ್ಯಾಸನ - ವಿಪರೀತ ಜ್ಞಾನ (ಭ್ರಾಂತಿ)
   3. ಶಕುನಿ - ನಾಸ್ತಿಕ್ಯಬುದ್ಧಿ
   4. ದುರ್ಯೋಧನನ ತಮ್ಮಂದಿರು - ಕಾಮ ಕ್ರೋಧಾದಿ ಸಮಸ್ತ ದೋಷಗಳು
   5. ಅಶ್ವತ್ಥಾಮಾಚಾರ್ಯರು - ಅಹಂಕಾರ
   6. ದ್ರೋಣಾಚಾರ್ಯರು - ಶ್ರೋತ್ರ
   7. ಭೀಷ್ಮಾಚಾರ್ಯರು - ವಾಕ್
   8. ಕರ್ಣ - ನೇತ್ರ
   9. ಅಭಿಮನ್ಯು - ಮನಸ್ಸು
   10. ವಿದುರ - ನೀತಿ
   11. ಧೃತರಾಷ್ಟ್ರ - ಮಮತೆಯೊಂದಿಗೆ ಲೋಭ
   12. ಗಾಂಧಾರಿ - ಪ್ರೀತಿ
   13. ಕುಂತಿ - ನ್ಯಾಯ, ವೈರಾಗ್ಯ
   14. ಪಾಂಡವ ಸೈನ್ಯ - ಪುಣ್ಯ
   15. ಕೌರವ ಸೈನ್ಯ - ಪಾಪ
   16. ಏಕಲವ್ಯ - ಕ್ರೋಧ, ತಂತ್ರ
   17. ಕುರುಕ್ಷೇತ್ರ - ಮನುಷ್ಯ ಜೀವನ, ಧರ್ಮಾಧರ್ಮಗಳ ಸಂಘರ್ಷ

ಇತ್ಯಾದಿ - ಇತ್ಯಾದಿ

# ಶ್ರೀಮದ್ಭಗವದ್ಗೀತಾ ವೈಭವ

| ಅಧ್ಯಾಯ | ವಿಷಯ | ಶ್ಲೋಕಗಳು | ಹೇಳಲ್ಪಟ್ಟ ಶ್ಲೋಕಗಳು | | | ಅರ್ಜುನನ ಪ್ರಶ್ನೆಗಳು | ಮಹಾಭಾರತದ ಪರ್ವಗಳು | ಶ್ಲೋಕಗಳು |
|---|---|---|---|---|---|---|---|---|
| | | | ಸಂಜಯ | ಅರ್ಜುನ | ಶ್ರೀಕೃಷ್ಣ | | | |
| 1 | ಅರ್ಜುನವಿಷಾದ ಯೋಗ | 47 | 25 | 21 | – | 1 | ಆದಿಪರ್ವ | 10,889 |
| 2 | ಸಾಂಖ್ಯಯೋಗ | 72 | 3 | 6 | 63 | 4 | ಸಭಾಪರ್ವ | 4,367 |
| 3 | ಕರ್ಮಯೋಗ | 43 | | 3 | 40 | 2 | ವನಪರ್ವ | 12,476 |
| 4 | ಜ್ಞಾನಯೋಗ | 42 | | 1 | 41 | 1 | ವಿರಾಟಪರ್ವ | 3,494 |
| 5 | ಸಂನ್ಯಾಸಯೋಗ | 29 | | 1 | 38 | 1 | ಉದ್ಯೋಗಪರ್ವ | 6,753 |
| 6 | ಧ್ಯಾನಯೋಗ | 47 | | 5 | 42 | 1 | ಭೀಷ್ಮಪರ್ವ | 5,809 |
| 7 | ಜ್ಞಾನವಿಜ್ಞಾನಯೋಗ | 30 | | – | 30 | 1 | ದ್ರೋಣಪರ್ವ | 10,012 |
| 8 | ಅಕ್ಷರಬ್ರಹ್ಮಯೋಗ | 28 | | 2 | 26 | 1 | ಕರ್ಣಪರ್ವ | 4,975 |
| 9 | ರಾಜವಿದ್ಯಾರಾಜಗುಹ್ಯಯೋಗ | 34 | | – | 34 | 5 | ಶಲ್ಯಪರ್ವ | 3,596 |
| 10 | ವಿಭೂತಿಯೋಗ | 42 | | 7 | 35 | 3 | ಸೌಪ್ತಿಕಪರ್ವ | 815 |
| 11 | ವಿಶ್ವರೂಪದರ್ಶನಯೋಗ | 55 | 8 | 33 | 14 | 3 | ಸ್ತ್ರೀಪರ್ವ | 807 |
| 12 | ಭಕ್ತಿಯೋಗ | 20 | | 1 | 19 | 1 | ಶಾಂತಿಪರ್ವ | 15,151 |
| 13 | ಕ್ಷೇತ್ರಕ್ಷೇತ್ರಜ್ಞಯೋಗ | 35 | | 1 | 34 | 1 | ಅನುಶಾಸನಪರ್ವ | 11,194 |
| 14 | ಗುಣತ್ರಯವಿಭಾಗಯೋಗ | 27 | | 1 | 26 | 1 | ಅಶ್ವಮೇಧಿಕಪರ್ವ | 4,555 |
| 15 | ಪುರುಷೋತ್ತಮಯೋಗ | 20 | | – | 20 | 6 | ಆಶ್ರಮವಾಸಿಕಪರ್ವ | 1,098 |
| 16 | ದೈವಾಸುರಸಂಪದ್ವಿಭಾಗಯೋಗ | 24 | | – | 24 | 3 | ಮೌಸಲಪರ್ವ | 301 |
| 17 | ಶ್ರದ್ಧಾತ್ರಯವಿಭಾಗಯೋಗ | 28 | | 1 | 27 | 1 | ಮಹಾಪ್ರಸ್ಥಾನಪರ್ವ | 111 |
| 18 | ಮೋಕ್ಷಸನ್ಯಾಸಯೋಗ | 78 | 5 | 2 | 71 | 2 | ಸ್ವರ್ಗಾರೋಹಣಪರ್ವ | 232 |
| | ಒಟ್ಟು ಶ್ಲೋಕಗಳು | 701 | 41+1 | 85 | 574 | 38 | | 1,00,000 |

ಶ್ರೀಕೃಷ್ಣನನ್ನು ಸಂಭೋದಿಸಿದ ನಾಮಗಳು: ಕೃಷ್ಣ, ಅಚ್ಯುತ, ಅನಂತ, ಕೇಶವ, ಗೋವಿಂದ, ಜನಾರ್ದನ, ಮಧುಸೂದನ, ಮಾಧವ, ವಾರ್ಷ್ಣೇಯ, ಅರಿಸೂದನ, ಮಹಾಬಾಹೋ, ಜಗತ್ಪತೇ, ದೇವದೇವ, ಭಗವನ್, ಭೂತಭಾವನ, ಭೂತೇಶ, ಯೋಗಿನ್, ಅನಂತರೂಪ, ಅನಂತವೀರ್ಯ, ಅಪ್ರತಿಮಪ್ರಭ, ಕಮಲಪತ್ರಾಕ್ಷ, ಜಗನ್ನಿವಾಸ, ದೇವ, ದೇವವರ, ದೇವೇಶ, ಪರಮೇಶ್ವರ, ಪುರುಷೋತ್ತಮ, ಪ್ರಭೋ, ಮಹಾತ್ಮನ್, ಯಾದವ, ಯೋಗೇಶ್ವರ, ವಿಶ್ವಮೂರ್ತಿ, ವಿಶ್ವರೂಪ, ವಿಶ್ವೇಶ್ವರ, ವಿಷ್ಣೋ, ಸಖಾ, ಸರ್ವ, ಸಹಸ್ರಬಾಹೋ, ಹೃಷೀಕೇಶ, ಕೇಶಿನಿಷೂದನ. **ಅರ್ಜುನನನ್ನು ಸಂಬೋಧಿಸಿದ ನಾಮಗಳು:** ಪಾರ್ಥ, ಅರ್ಜುನ, ಅನಘ, ಕುರುನಂದನ, ಕೌಂತೇಯ, ಗುಡಾಕೇಶ, ಧನಂಜಯ, ಭರತರ್ಷಭ, ಭಾರತ, ಪರಂತಪ, ಪಾಂಡವ, ಕುರುಶ್ರೇಷ್ಠ ದೇಹಭೃತಾಂವರ, ಕುರುಸತ್ತಮ, ಪುರುಷರ್ಷಭ, ಭರತಶ್ರೇಷ್ಠ ಭರತಸತ್ತಮ, ಸವ್ಯಸಾಚಿನ್, ಕುರುಪ್ರವೀರ, ಮಹಾಬಾಹೋ

# ವೇದವ್ಯಾಸರ ಪರಿವಾರ

ಸತ್ಯವತೀ + ಪರಾಶರರು : ಶ್ರೀ ವೇದವ್ಯಾಸರು

ಸತ್ಯವತೀ + ಶಂತನು : ಚಿತ್ರಾಂಗದ, (ಯುದ್ಧದಲ್ಲಿ ಸತ್ತ)

ವಿಚಿತ್ರವೀರ್ಯ (ಹೆಂಡದಿರು)

ವೇದವ್ಯಾಸರ ದ್ವಾರ ಮಕ್ಕಳಾದದ್ದು

| ಅಂಬಿಕಾ | ಅಂಬಿಕೆಯ ದಾಸಿಯಲ್ಲಿ | ಅಂಬಾಲಿಕಾ |
|---|---|---|
| **ಧೃತರಾಷ್ಟ್ರ** + ಗಾಂಧಾರಿಯಲ್ಲಿ | **ವಿದುರ** | **ಪಾಂಡುರಾಜ** + ಕುಂತಿಯಲ್ಲಿ |
| ದುರ್ಯೋಧನಾದಿ 100 ಮಕ್ಕಳು | | ಧರ್ಮರಾಜ |
| ದುಃಶಲಾ – ಪುತ್ರಿ | | ಭೀಮಸೇನ |
| | | ಅರ್ಜುನ |

ಪಾಂಡವರಲ್ಲಿ ದ್ರೌಪದೀದೇವಿಯರಿಂದ

ಧರ್ಮರಾಜ – ಪ್ರತಿವಿಂಧ್ಯ

ಭೀಮಸೇನ – ಶ್ರುತಸೇನ

ಅರ್ಜುನ – ಶ್ರುತಕೀರ್ತಿ

ನಕುಲ – ಶತಾನೀಕ

ಸಹದೇವ – ಶ್ರುತಕರ್ಮ

(ಪಾಂಡುರಾಜ) + ಮಾದ್ರಿಯಲ್ಲಿ

ನಕುಲ

ಸಹದೇವ

ಧರ್ಮರಾಜ+ ಪೌರವೀ – ದೇವಕ

ಭೀಮಸೇನ + ಹಿಡಿಂಬೆ – ಘಟೋತ್ಕಚ

+ ಕಾಲೀ – ಶರ್ವಗತ

ಅರ್ಜುನ + ಉಲೂಪೀ – ಇರಾವಂತ

+ ಚಿತ್ರಾಂಗದ – ಬಭ್ರುವಾಹನ

+ ಸುಭದ್ರಾ – ಅಭಿಮನ್ಯು + ಉತ್ತರಾ

ಪರೀಕ್ಷಿತ

ಜನಮೇಜಯ, ಶ್ರುತಸೇನ, ಭೀಮಸೇನ, ಉಗ್ರಸೇನ

ಶತಾನೀಕ

ನಕುಲ + ಕರೇಣುಮತೀ – ನಿರಮಿತ್ರ

ಸಹದೇವ + ವಿಜಯಾ – ಸುಹೋತ್ರ

ಹೀಗೆ ಕ್ಷೇಮಕರಾಜನವರೆಗೂ ಮುಂದುವರೆಯಿತು.

# ಶ್ರೀಮದ್ಭಾಗವತ ಶ್ರೀಕೃಷ್ಣ ಪ್ರತಿಮೆ

| ಸ್ಕಂಧ | ಶ್ರವಣದಫಲ | ಶ್ರೀಕೃಷ್ಣ ಪ್ರತಿಮೆ |
|---|---|---|
| ಪ್ರಥಮ ಸ್ಕಂಧ | ವಿಷ್ಣುಭಕ್ತನಾದಮಗನಪ್ರಾಪ್ತಿ | |
| ದ್ವಿತೀಯ ಸ್ಕಂಧ | ಉತ್ತಮ ಸದ್ಗತಿ | ಶ್ರೀ ಕೃಷ್ಣನ ಪಾದಗಳು |
| ತೃತೀಯಸ್ಕಂಧ | ಭಗವಂತನ ಜ್ಞಾನ | |
| ಚತುರ್ಥ ಸ್ಕಂಧ | ನರಕದಿಂದ ಮುಕ್ತಿ | ಶ್ರೀ ಕೃಷ್ಣನ ತೊಡೆಗಳು |
| ಪಂಚಮ ಸ್ಕಂಧ | ಸತ್ಸಂಗ-ಸದ್ಗತಿ | ಶ್ರೀ ಕೃಷ್ಣನ ನಾಭಿ ಪ್ರದೇಶ |
| ಷಷ್ಟ ಸ್ಕಂಧ | ಬ್ರಹ್ಮಹತ್ಯಾದಿ ದೋಷ ನಾಶ | ಶ್ರೀ ಕೃಷ್ಣನ ಹೃದಯ |
| ಸಪ್ತಮ ಸ್ಕಂಧ | ಶ್ರೀಹರಿ ಪ್ರೀತಿಗೆ ಪಾತ್ರನಾಗುವ | |
| ಅಷ್ಟಮ ಸ್ಕಂಧ | ಸಾಮ್ರಾಜ್ಯ ಭೋಗ | ಶ್ರೀ ಕೃಷ್ಣನ ಬಾಹುಗಳು |
| ನವಮ ಸ್ಕಂಧ | ಸತ್ಸಂತತಿ ವೃದ್ಧಿ | ಶ್ರೀ ಕೃಷ್ಣನ ಕಂಠದೇಶ |
| ದಶಮ ಸ್ಕಂಧ | ಶ್ರೀಕೃಷ್ಣನ ಲೋಕ ಪ್ರಾಪ್ತಿ | ಶ್ರೀ ಕೃಷ್ಣನ ಮುಖ |
| ಏಕಾದಶ ಸ್ಕಂಧ | ಲಿಂಗದೇಹದಿಂದ ಬಿಡುಗಡೆ | ಶ್ರೀ ಕೃಷ್ಣನ ಲಲಾಟ |
| ದ್ವಾದಶ ಸ್ಕಂಧ | ಎಲ್ಲ ಅಭೀಷ್ಟಗಳ ಪ್ರಾಪ್ತಿ | ಶ್ರೀ ಕೃಷ್ಣನ ಶಿಖಾ |

## ಭಾಗವತ ಧರ್ಮಗಳು - 30

(1) ಸರ್ವತ: ಮನಸೋ ಸಂಗ (2) ಸಾಧುಸಂಗ (3) ಶೌಚ (4) ತಪಃ (5) ತಿತಿಕ್ಷಾ (6) ಮೌನ (7) ಸ್ವಾಧ್ಯಾಯ (8) ಆರ್ಜವಂ (9) ಬ್ರಹ್ಮಚರ್ಯ (10) ಅಹಿಂಸಾ (11) ಸಮತ್ವಂ (12) ಸರ್ವತ್ರ ಆತ್ಮೇಶ್ವರಾನ್ವೀಕ್ಷಾ (13) ಕೈವಲ್ಯಂ (14) ಅನಿಕೇತನಂ (15) ವಿವಿಕ್ತದೇಶ ಸೇವಿತ್ವಂ (16) ಚೀರವಸನಂ (17) ಸಂತೋಷಂ ಯೇನಕೇನಚಿತ್ (18) ಪರಾರ್ಥೇ ಆಹೇಕ್ಷಾ (19) ಸತ್ಯಂ (20) ಆಭಯಂ (21) ಶಮ-ದಮ (22) ಶ್ರವಣಂ (23) ಕೀರ್ತನಂ (24) ಸ್ಮರಣಂ (25) ಸೇವಾ (26) ಪೂಜಾ (27) ಅವನತಿಃ (28) ಸಖ್ಯಂ (29) ದಾಸ್ಯಂ (30) ಆತ್ಮಸಮರ್ಪಣಂ.

| ಸ್ಕಂಧ | ಭಗವನ್ಮೂರ್ತಿ | ಶ್ರೀಕೃಷ್ಣನ ರೂಪ | ಪುಷ್ಪ | ಗಂಧ | ಫಲ | ರತ್ನ | ಧಾನ್ಯ |
|---|---|---|---|---|---|---|---|
| ಪ್ರಥಮ | ಕೇಶವ | ಪಾದಗಳು | ಜಾಜಿ | ಶ್ರೀಖಂಡ | ನಾರಂಗ | ಮುತ್ತು | ತಂಡುಲ |
| ದ್ವಿತೀಯ | ನಾರಾಯಣ | ಪಾದಗಳು | ಸಂಪಿಗೆ | ದೇವದಾರು | ತೆಂಗನ ಕಾಯಿ | ಹವಳ | ತೊಗರಿ |
| ತೃತೀಯ | ಮಾಧವ | ತೊಡೆಗಳು | ಪುನ್ನಾಗ | ಪಚ್ಚಕರ್ಪೂರ | ಮಾದಳ | ವಜ್ರ | ಗೋಧಿ |
| ಚತುರ್ಥ | ಗೋವಿಂದ | ತೊಡೆಗಳು | ಪಾದರಿ | ಕುಂಕುಮ | ಮಾವು | ವೈಡೂರ್ಯ | ಉದ್ದು |
| ಪಂಚಮ | ವಿಷ್ಣು | ನಾಭಿ | ಕೇತಕಿ | ಗೋರೋಜನ | ಕದಳಿ | ಪುಷ್ಯರಾಗ | ಹೆಸರು |
| ಷಷ್ಠ | ಮಧುಸೂದನ | ಹೃದಯ | ಮಲ್ಲಿಕಾ | ತೆಕ್ಕೋಲ | ಖರ್ಜೂರ | ಗೋಮೇಧಿಕ | ಚಣಕ |
| ಸಪ್ತಮ | ತ್ರಿವಿಕ್ರಮ | ಬಾಹುಗಳು | ಕುಂದ | ಲಾವಂಚ | ದಾಳಿಂಬೆ | ಕೆಂಪು | ಅವರೆ |
| ಅಷ್ಟಮ | ವಾಮನ | ಬಾಹುಗಳು | ಪದ್ಮ | ಅಗರು | ಧಾತ್ರಿ | ಪಚ್ಚೆ | ಹುರುಳಿ |
| ನವಮ | ಶ್ರೀಧರ | ಕಂಠ | ತುರುಕ | ಶ್ರೀಗಂಧ | ನೇರಳೆ | ನೀಲ | ಎಳ್ಳು |
| ದಶಮ | ಹೃಷಿಕೇಶ | ಮುಖ | ಬಕುಳ (ಕಚೋರ) | ದಮನಕ | ಸ್ವರ್ಣ | ಹೇಮ | ಸಾಮೆ |
| ಏಕಾದಶ | ಪದ್ಮನಾಭ | ಲಲಾಟ | ಕಲ್ಹಾರ | ಕಚೋರ | ಪ್ರಿಯಾ | ಬೆಳ್ಳಿ | ಬೆಲ್ಲ |
| ದ್ವಾದಶ | ದಾಮೋದರ | ಶಿಖಾ | ಶೇವಂತಿಗೆ | ಕಚೋರ | ದ್ರಾಕ್ಷಿ | ದಕ್ಷಿಣಾ | ತುಪ್ಪ |

## ವಿಶೇಷಾಃ

| ವಸ್ತ್ರ | ಭರಣ | ಮಹಾದಾನ | ಭಕ್ಷ್ಯ | ಹೋಗುವ ಪಾಪ | ಬರುವ ಪುಣ್ಯ |
|---|---|---|---|---|---|
| ಪೀತಾಂಬರ | ಕುಂಡಲ | ಗಜ | ಉದ್ದಿನ ಆಂಬೊಡೆ | ಮಾತೃಗಮನ | ಸುಪುತ್ರ |
| ಊರ್ಣವಸ್ತ್ರ | ಹಾರ | ಅಶ್ವ | ಪೂರಿ | ಬ್ರಹ್ಮಸ್ವಹರಣ | ಸುಗತಿ |
| ಕೌಶೇಯ | ಬಾಹು ಭೂಷಣ | ವೃಷಭ | ಶಷ್ಕುಲಿ | 1 ಮಿತ್ರದ್ರೋಹ, 2. ಪರಸ್ತ್ರೀಗಮನ | ಸುಜ್ಞಾನ |
| ಹರಿತ | ಉಂಗುರ | ಎಮ್ಮೆ | ದೋಸೆ | ಕೃತಘ್ನ | ನರಕಾನ್ಮುಕ್ತಿ |
| ಚಿತ್ರವರ್ಣ | ಕಟಿಸೂತ್ರ | ಅಜ | ಅನರಸ | ಬಾಲಹತ್ಯಾ | ಸತ್ಸಂಗ |
| ನೀಲ | ಪದ್ಮಕ | ದಾಸ | ಗುಡಪೂರ್ಣ | ಬ್ರಹ್ಮಸ್ತ್ರೀಗಮನ | ಬ್ರಹ್ಮಹತ್ಯಾ ಪರಿಹಾರ |
| ಕರ್ಬುರ | ಕಿರೀಟ | ದಾಸೀ | ಶಾಮಿಗೆ ಫೇಣಿ | ಸ್ತ್ರೀಹತ್ಯಾ | ಶ್ರೀಹರಿಪ್ರೀತಿ |
| ಧವಳ | ಕಡಗ | ಕನ್ಯಾ | ಹೋಳಿಗೆ | ಬ್ರಹ್ಮಹತ್ಯಾ. | ಸಾಮ್ರಾಜ್ಯ |
| ಪಾಟಲ | ಮಣಿನೂಪುರ | ಶಕಟ | ಗರ್ಭಭಕ್ಷ್ಯ | ಗೋಹತ್ಯಾ | ಸಂತಾನವೃದ್ಧಿ |
| ಸುವರ್ಣವಸ್ತ್ರ | ರಥ | ಪಂಚಭಕ್ಷ್ಯ | ಹೋಳಿಗೆ ಚಿರೋಟಿ ಗುಳೂರಿಗೆ ಲಾಡು ಫೇಣಿ | ಗುರುಹತ್ಯಾ ಸುರಾಪಾನ ಗುರುಸ್ತ್ರೀಗಮನ ಇತ್ಯಾದಿ | ಶ್ರೀಕೃಷ್ಣ ಸಾಲೋಕ್ಯ |
| ಸೂಕ್ಷ್ಮಮಡಿ | ಚಾಮರ | ಸುರಭಿಭಕ್ಷ್ಯ | ಮಂಡಿಗೆ | ಪಿತೃಸಂಹಾರಾದಿ | ಸರ್ವಾಭೀಷ್ಟ |
| ಕಾಶ್ಮೀರ | ಪಾಡಗ | ಗೃಹ | ಪಕ್ವಸೂತ್ರ (ಕರೆದ ಶಾಮಿಗೆ ಪರಮಾನ್ನ) | ಪುರಾಣಿಕರ ಅವಮಾನ | ಕೃತಾರ್ಥತಾ |

# ಶ್ರೀಮದ್ಭಾಗವತದ ಸ್ಕಂದ-ಅಧ್ಯಾಯ-ಶ್ಲೋಕ ಸಂಖ್ಯೆಗಳು

| ಸ್ಕಂಧ | | ವೈಷ್ಣವರ ಪಾಠದಂತೆ ಅಧ್ಯಾಯ-ಶ್ಲೋಕ | | ಅದ್ವೈತಪಾಠ ಅಧ್ಯಾಯ-ಶ್ಲೋಕ | | ಭಾಗವತ ತಾತ್ಪರ್ಯದಲ್ಲಿ ಅಧ್ಯಾಯ-ಶ್ಲೋಕ | |
|---|---|---|---|---|---|---|---|
| 1 | – | 20 | 815 | 19 | 809 | 20 | 152 |
| 2 | – | 10 | 396 | 10 | 391 | 10 | 193 |
| 3 | – | 34 | 1424 | 33 | 1400 | 34 | 374 |
| 4 | – | 31 | 1472 | 31 | 1445 | 31 | 244 |
| 5 | – | 24 | 667 | 26 | 668 | 19 | 73 |
| 6 | – | 19 | 855 | 19 | 851 | 14 | 71 |
| 7 | – | 16 | 775 | 15 | 750 | 16 | 143 |
| 8 | – | 23 | 931 | 24 | 931 | 9 | 41 |
| 9 | – | 21 | 972 | 24 | 964 | 5 | 11 |
| 10 | – | 48 | 1881 | 49 | 2013 | 17 | 94 |
| | – | 55 | 2499 | 41 | 1933 | 9 | 72 |
| 11 | – | 31 | 1374 | 31 | 1367 | 30 | 431 |
| 12 | – | 13 | 561 | 13 | 566 | 2 | 13 |
| **ಒಟ್ಟು** | | **345** | **14,622** | **335** | **14088** | **216** | **1912** |

# ಶ್ರೀಕೃಷ್ಣನ ಅಷ್ಟಮಹಿಷಿಯರು ಹಾಗೂ ಅವರ ಸಂತಾನ

| | ಮಡದಿಯ ತಂದೆ | ಮಕ್ಕಳು |
|---|---|---|
| 1. ರುಕ್ಮಿಣೀ | ವಿದರ್ಭದೇಶದ ಭೀಷ್ಮಕರಾಜ | ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಚಾರುಚಂದ್ರ, ವಿಚಾರು, ಭದ್ರಚಾರು ಚಾರುಮತಿ(ಪುತ್ರಿ) |
| 2. ಸತ್ಯಭಾಮಾ | ಯದುವಂಶದ ಸತ್ರಾಜಿತ | ಭಾನು, ಸುಭಾನು, ಸ್ವರ್ಭಾನು, ಪ್ರಭಾನು ಭಾನುಮಂತ, ಚಂದ್ರಭಾನು ಬೃಹದ್ಭಾನು, ಅತಿಭಾನು, ಶ್ರೀಭಾನು ಒಬ್ಬಪುತ್ರಿ |
| 3. ಜಾಂಬವತಿ | ಋಕ್ಷರಾಜ ಜಾಂಬವಂತ | ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ, ದ್ರವಿಡ, ಕ್ರತು, ಒಬ್ಬಪುತ್ರಿ |
| 4. ಭದ್ರಾ | ಕೇಕಯದೇಶಾಧಿಪ ದೃಷ್ಟಕೇತು | ಸಂಗ್ರಾಮಜಿತ್, ಬೃಹತ್ಸೇನ, ಶೂರ, ಪ್ರಹರಣ, ಅರಿಜಿತ್, ಜಯ, ಸುಭದ್ರ, ವಾಮ, ಆಯು, ಸತ್ಯಕ, ಒಬ್ಬಪುತ್ರಿ |
| 5. ಮಿತ್ರವಿಂದಾ | ಅವಂತಿ ಅರಸ ಜಯತ್ಸೇನ | ವೃಕ, ಹರ್ಷ, ಅನಿಲ, ಗೃಧ್ರ, ವರ್ಧನ, ಉನ್ನಾದ, ಮಹಾಶ, ಪಾವನ, ವಹ್ನಿ, ಕ್ಷುಧಿ, ಒಬ್ಬಪುತ್ರಿ |
| 6. ನೀಲಾ(ಸತ್ಯಾ) | ಕೋಸಲರಾಜ ನಗ್ನಜಿತ | ವೀರ, ಚಂದ್ರ, ಅಶ್ವಸೇನ, ಚಿತ್ರಗು, ವೇಗವಂತ, ವೃಕ್ಷ, ಆಮ, ಶಂಕು, ಕುಂತಿ (ಪುತ್ರಿ) |
| 7. ಕಾಳಿಂದೀ | ಸೂರ್ಯ | ಶ್ರುತ, ಕವಿ, ವೃಷ, ವೀರ, ಸುಬಾಹು, ಭದ್ರ, ದರ್ಶ, ಪೂರ್ಣಮಾಸ, ಸೋಮಕ, ಶಾಂತಿ (ಪುತ್ರಿ) |
| 8. ಲಕ್ಷಣಾ | ಮದ್ರರಾಜ | ಪ್ರಘೋಷ, ಗಾತ್ರವಂತ, ಸಿಂಹಬಲ, ಪ್ರಬಲ, ಊರ್ಧ್ವಗ, ಸಹ, ಮಹಾಶಕ್ತಿ, ಓಜ, ಅಪರಿಜಿತ್, ಒಬ್ಬಪುತ್ರಿ. |

ಶ್ರೀಕೃಷ್ಣನ ಒಟ್ಟು 16108 ಮಡದಿಯರಲ್ಲಿ ನರಕಾಸುರನ ಬಂದಿಗಳಾಗಿದ್ದ 16 ಸಾವಿರ ಸ್ತ್ರೀರತ್ನಗಳನ್ನು ಮದುವೆಯಾದ. ಪ್ರತಿಯೊಬ್ಬರಲ್ಲೂ 10 ಗಂಡು ಒಂದು ಹೆಣ್ಣು ಮಕ್ಕಳನ್ನು ಪಡೆದು ದ್ವಾರಕೆಯಲ್ಲಿ ಪ್ರತಿಯೊಬ್ಬರ ಮನೆಯಲ್ಲಿ ಪ್ರತ್ಯೇಕ ರೂಪದಿಂದ ಏಕಕಾಲದಲ್ಲಿಯೇ ಸಂಸಾರಮಾಡಿದ.

# ಪೂಜಾವಿಧಾನಗಳು

## ಪಂಚೋಪಚಾರ ಪೂಜಾ

(1) ಅರ್ಘ್ಯ, (2) ಪಾದ್ಯ, (3) ಆಚಮನ, (4) ಮಧುಪರ್ಕ, (5) ಪುನರಾಚಮನ,
(1) ಗಂಧ, (2) ಪುಷ್ಪ (3) ಧೂಪ, (4) ದೀಪ (5) ನೈವೇದ್ಯ

## ಅಷ್ಟೋಪಚಾರ ಪೂಜಾ

|  |  |  |  |
|---|---|---|---|
| 1. ಧ್ಯಾನ | 2. ಆವಾಹನ | 3. ಆಸನ | 4. ಅರ್ಘ್ಯ |
| 5. ಪಾದ್ಯ | 6. ಆಚಮನ | 7. ಮಧುಪರ್ಕ | 8. ಪುನರಾಚಮನ |

## ಅಷ್ಟಭಾವಪೂಜಾ

ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ।
ಸರ್ವಭೂತದಯಾಪುಷ್ಪಂ ಕ್ಷಮಾಪುಷ್ಪ ವಿಶಿಷ್ಯತೇ ॥
ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತು ಸಪ್ತಮಂ।
ಸತ್ಯಂ ಚೈವಾಷ್ಟಮಂ ಪುಷ್ಪಂ ಏಭಿಸ್ತುಷ್ಯತಿ ಕೇಶವಃ ॥ –ಭಾವಪ್ರಕಾಶಿಕಾ.

|  |  |  |  |
|---|---|---|---|
| 1. | ಅಹಿಂಸಾ – ಪ್ರಥಮ ಪುಷ್ಪ | 2. | ಇಂದ್ರಿಯನಿಗ್ರಹ – ದ್ವಿತೀಯ ಪುಷ್ಪ |
| 3. | ಸರ್ವಭೂತದಯಾ – ತ್ರಿತೀಯ ಪುಷ್ಪ | 4. | ಕ್ಷಮೆ – ಚತುರ್ಥ ಪುಷ್ಪ |
| 5. | ಜ್ಞಾನ – ಪಂಚಮಪುಷ್ಪ | 6. | ತಪಸ್ಸು – ಷಷ್ಟಪುಷ್ಪ |
| 7. | ಧ್ಯಾನ – ಸಪ್ತಮ ಪುಷ್ಪ | 8. | ಸತ್ಯ – ಅಷ್ಟಮ ಪುಷ್ಪ |

### ಷೋಡಶೋಪಚಾರ ಪೂಜಾ

|  |  |  |  |
|---|---|---|---|
| 1. ಆವಾಹನೆ. | 2. ಆಸನ | 3. ಪಾದ್ಯ | 4. ಅರ್ಘ್ಯ |
| 5. ಆಚಮನ | 6. ಸ್ನಾನ | 7. ವಸ್ತ್ರ | 8. ಯಜ್ಞೋಪವೀತ |
| 9. ಗಂಧ | 10. ಪುಷ್ಪ | 11. ಧೂಪ | 12. ದೀಪ |
| 13. ನೈವೇದ್ಯ | 14. ಪುಷ್ಪಾಂಜಲಿ | 15. ಪ್ರದಕ್ಷಿಣ | 16. ಉದ್ವಾಸನ |

## 18 ಉಪಚಾರಗಳು :

ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ ಯಜ್ಞೋಪವೀತ, ಭೂಷಣಗಳು, ಗಂಧ, ಪುಷ್ಪ ಧೂಪ, ನೈವೇದ್ಯ, ತರ್ಪಣ, ಪುಷ್ಪಮಾಲಾ, ಅನುಲೇಪನ, ನಮಸ್ಕಾರ, ಪ್ರದಕ್ಷಿಣೆ.

## ಸಿದ್ಧಿ ಐಶ್ವರ್ಯಗಳು

1. **ಅಣಿಮಾ** – ಸೂಕ್ಷ್ಮರೂಪ ಧರಿಸುವ ಸಿದ್ಧಿ
2. **ಮಹಿಮಾ** – ದೊಡ್ಡರೂಪ ಧರಿಸುವ ಸಿದ್ಧಿ
3. **ಗರಿಮಾ** – ಭಾರವಾಗುವಿಕೆ
4. **ಲಘಿಮಾ** – ಹಗುರವಾಗುವಿಕೆ
5. **ಪ್ರಾಪ್ತಿ** – ಪಡೆಯಲು ಸಾಧ್ಯವಾಗದ್ದನ್ನು ಪಡೆಯುವದು
6. **ಪ್ರಾಕಾಮ್ಯ** – ಸ್ವಲ್ಪವನ್ನು ವಿಪುಲವಾಗಿಸುವಿಕೆ
7. **ಈಶಿತ್ವ** – ಎಲ್ಲಕಡೆ ಪ್ರಭಾವ ಬೀರುವದು
8. **ವಶಿತ್ವ** – ಇಂದ್ರಿಯ ನಿಗ್ರಹ

## 8 ಇತರ ಅಷ್ಟಸಿದ್ಧಿಗಳು

1. **ಮಿಥುನೋತ್ಪತ್ತಿ ಸಿದ್ಧಿ:** ಭೋಗಸಾಧನ ಸ್ತ್ರೀ ಇಲ್ಲದೆ ವಿಷಯಾನಂದಾನುಭವ.
2. **ರಸೋಲ್ಲಾಸ ಸಿದ್ಧಿ:** ಯೋಗಾಭ್ಯಾಸದಿಂದ ತನ್ನ ತಲೆಯಮೇಲೆ ಅಮೃತವನ್ನು ಸ್ರವಿಸಿದಂತೆ ಆನಂದಾನುಭವ.
3. **ಸಕೃತ್ವೃಷ್ಟಿಮಯ ಸಿದ್ಧಿ:** ಒಮ್ಮೆ ಮಳೆ ಬಂದು ಸಕಲ ಸಸ್ಯಗಳೂ ಸಮೃದ್ಧಿಯಾಗಿ ಫಲಿಸುವಿಕೆ.
4. **ಗೃಹವೃಕ್ಷಾತ್ಮಕ ಸಿದ್ಧಿ:** ಬೇಕಾದಕಡೆ, ಮನಸ್ಸಿಗೆ ಬಂದಂತೆ, ಇಷ್ಟವಾದ ರೀತಿಯಲ್ಲಿ ಮನೆಮಠ ಮಂದಿರಗಳನ್ನು ನಿರ್ಮಿಸಿಕೊಳ್ಳುವುದು.
5. **ಸಂಕಲ್ಪ ಸಿದ್ಧಿ:** ಯಾವರೀತಿ ಇಚ್ಛಿಸುವನೋ ಹಾಗೆ ಸಕಲ ಕಾಮನೆಗಳೂ ಕೈಗೂಡುವದು.
6. **ಕಲ್ಪವೃಕ್ಷಾತ್ಮಕಸಿದ್ಧಿ:** ಸ್ವರ್ಗಸೌಖ್ಯಕ್ಕೂ ಮಿಗಿಲಾಗಿ ಇತರರಿಗೆ ಬಯಸಿದ ರೀತಿಯಲ್ಲಿ ಬಯಕೆಗಳನ್ನು ಈಡೇರಿಸುವದು.
7. **ಪ್ರಕಾಮವೃಷ್ಟಿಸಿದ್ಧಿ:** ಅವಶ್ಯವಾದಾಗ ಬೇಕಾದಲ್ಲಿ ಸಮೃದ್ಧಿಯಾಗಿ ಮಳೆ ಸುರಿಸುವದು.
8. **ಅಕೃಷ್ಟಪಚ್ಯಸಿದ್ಧಿ :** ಭೂಮಿಯಲ್ಲಿ ಬೀಜವನ್ನು ಬಿತ್ತದೆಯೇ ಬೇಕಾದ ಕಾಲದಲ್ಲಿ ಧಾನ್ಯಾದಿಗಳನ್ನು ಪಡೆಯುವದು.

(ಮೇಲಿನ ಸಿದ್ಧಿಗಳು ಅವರವರ ಪ್ರಯತ್ನ, ಯೋಗ್ಯತಾ, ದೈವಾನುಗ್ರಹ ಅನುಸಾರವಾಗಿ ಬುದ್ಧಿಕಾರ್ಯಗಳಾಗಿರುತ್ತವೆ. ದೇವತೆಗಳು ಋಜುಗಳು ಈ ಎಲ್ಲವನ್ನು ತಾರತಮ್ಯದಿ ಪಡೆದಿರುತ್ತಾರೆ.)

## 32 ಸಲ್ಲಕ್ಷಣಗಳು

**ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ ।**
**ತ್ರಿಪೃಥುಸ್ತ್ರಿಷು ಗಂಭೀರೋದ್ವಾತ್ರಿಂಶಲ್ಲಕ್ಷಣಸ್ತ್ವಿತಿ ॥**

**ಐದು ದೀರ್ಘ** - ಭುಜ, ನೇತ್ರ, ಗದ್ದ ತೊಡೆ ಮತ್ತು ನಾಸಿಕೆ.

**ಐದು ಸೂಕ್ಷ್ಮ** - ತೊಗಲು, ಕೂದಲು, ಬೆರಳು, ಹಲ್ಲು ಮತ್ತು ಬೆರಳುಗಳಲ್ಲಿನ ಪರ್ವಗಳು.

**ಏಳು ಕೆಂಪಗೆ** - ಕಣ್ಣು ಅಂಚು, ಉಗುರು, ಅಂಗೈ, ಅಂಗಾಲು, ಕಾಲು, ನಾಲಿಗೆ ಮತ್ತು ಕೆಳತುಟಿ.

**ಆರು ಉನ್ನತ** - ಕಕ್ಷ, ಕುಕ್ಷಿ, ವಕ್ಷಸ್ಸು, ಮೂಗು, ಹೆಗಲು ಮತ್ತು ಹಣೆ.

**ಮೂರು ವಿಶಾಲಸ್ಥಾನ** - ಹಣೆ, ಕೆಳಸೊಂಟ ಮತ್ತು ಎದೆ.

**ಮೂರು ಹ್ರಸ್ವ** - ಕುತ್ತಿಗೆ, ಜನನೇಂದ್ರಿಯ ಮತ್ತು ಬೆನ್ನು.

**ಮೂರು ಗಂಭೀರ** - ಸ್ವರ, ಶಕ್ತಿ ಮತ್ತು ನಾಭಿ.

(ಈ ಸಂಪೂರ್ಣ ಸಲ್ಲಕ್ಷಣಭರಿತವಾದ ಭಗವಂತನ ಋಜುಗಳನ್ನು ಸದಾ ಸ್ಮರಿಸಬೇಕು.)

## ಯಮ-ನಿಯಮಗಳು

**ಯಮ :** ನಮ್ಮ ಶರೀರದಿಂದ ಉನ್ನತಿಗೆ ಆಗಬೇಕಾದ ಸಾಧನೆಗಳು ಹಾಗೂ ಕೌಟುಂಬಿಕ ಸಾಮಾಜಿಕ ನೆಮ್ಮದಿಗೆ ಸಮಾಜದ ಪ್ರತಿಯೊಬ್ಬರೂ ಮಾಡಬೇಕಾದ ಧಾರ್ಮಿಕ ವಿಧಿಗಳು. **ಯಮಗಳು 12**

ಅಹಿಂಸೆ, ಸತ್ಯ, ಆಸ್ತೇಯ (ಕಳ್ಳತನಮಾಡದಿರುವುದು), ಅಸಂಗ (ದುರ್ವಿಷಯಗಳಲ್ಲಿ ಅನಾಸಕ್ತಿ), ಹ್ರೀ (ಕೆಟ್ಟಕೆಲಸಕ್ಕಾಗಿ ಲಜ್ಜೆ), ಅಸಂಚಯ (ಅಸುಗ್ರಹ), ಆಸ್ತಿಕ್ಯ (ದೇವ ವೇದಾದಿಗಳಲ್ಲಿ ಶ್ರದೆ), ಬ್ರಹ್ಮಚರ್ಯ (ತತ್ತ್ವಜ್ಞಾನದಲ್ಲಿ ಜಿಜ್ಞಾಸೆ), ಮೌನ, ಸ್ಥೈರ್ಯ, ಕ್ಷಮಾ, ಅಭಯ.

**ನಿಯಮ:** ಜೀವನದ ವಿಶಿಷ್ಟ ಧ್ಯೇಯಕ್ಕಾಗಿ, ಮೋಕ್ಷಾದಿ ಫಲ ಪಡೆಯಲು, ಸ್ವಇಚ್ಛೆಯಿಂದ ತಿಳಿದು ತಿಳಿದಂತೆ ಆಚರಿಸುವ ಧಾರ್ಮಿಕ ವಿಧಿಗಳು. **ನಿಯಮಗಳು 12**

ಶೌಚ, ಜಪ, ತಪ, ಹೋಮ, ಶ್ರದಾ, ಆತಿಥ್ಯ, ಭಗವಂತನ ಪೂಜೆ, ಅರ್ಚನೆ, ತೀರ್ಥಾಟನೆ, ಪರಾರ್ಥೇಹಾ(ಭಗವಂತರ ಅಸಂಗ) ತುಷ್ಟಿ, ಆಚಾರ್ಯಸೇವಾ.

# ದೀಪದ ಮಹತ್ವ

- ದೀಪವನ್ನು ಜ್ಞಾನದ ಸಂಕೇತವಾಗಿ ಹೋಲಿಸುವ ಪರಿಪಾಠ ಮೊದಲಿನಿಂದ ಇದೆ.
- ದೀಪ ಪ್ರಜ್ವಲನವು ಷೋಡಶೋಪಚಾರ ಪೂಜಾದಲ್ಲಿನದಾಗಿದೆ.
- ದೀಪವನ್ನು ಹಚ್ಚದೆ, ನೀರಾಜನ ಮಾಡದೆ ಭಗವಂತನ ಪೂಜೆ ಮಾಡಬಾರದು.
- ದೀಪದಲ್ಲಿ ಭಗವಂತನ ಹದಿಮೂರು (13) ರೂಪಗಳಿವೆ.
- ಮನಸ್ಸಿನ ಏಕಾಗ್ರತೆ ದೀಪ ಹಚ್ಚುವುದರಿಂದ ಲಭಿಸುತ್ತದೆ.
- ದೀಪ ಹಚ್ಚುವುದರಿಂದ ಲೌಕಿಕ ಹಾಗೂ ಅಲೌಕಿಕ ಫಲ. ಭಗವಂತನ ಜ್ಞಾನ ಪ್ರಾಪ್ತಿ.
- ಯಾವ ದೀಪವು ನಂದದೆ ಸದಾ ಬೆಳಗುತ್ತದೆಯೋ ಅದೇ ನಂದಾದೀಪ. ಇಂತಹ ದೀಪವಿದ್ದಲ್ಲಿ ಮನೆಯಲ್ಲಿ ಅಲಕ್ಷ್ಮಿ ಪ್ರವೇಶವಿಲ್ಲ.
- ಸದಾ ಬೆಳಗುವ ದೀಪ ಮನೆಯ ಕತ್ತಲನ್ನು, ಹೃದಯದಲ್ಲಿ ಅಂಧಕಾರವ ನೀಗಿಸುತ್ತದೆ.
- ವಿಷ್ಣುವಿಗೆ ಗೋಘೃತದಿಂದಾಗಲೀ (ತುಪ್ಪ) ತಿಲತೈಲ (ಎಳ್ಳೆಣ್ಣೆ) ಗಳಿಂದ ದೀಪ ಹಚ್ಚಬೇಕು. ಇದು ವಿಷ್ಣುಲೋಕ ಪ್ರಾಪ್ತಿಗೆ ಕಾರಣವಾಗಿದೆ.
- **ಏಳುತರಹದ ದೀಪಗಳು** - ಘೃತ ದೀಪ, ತೈಲದೀಪ, ಸಾರ್ಷಪ (ಸಾಸುವೆ ಎಣ್ಣೆ ದೀಪ), ರಾಜಿಕೋದ್ಭವ ದೀಪ, ಫಲನಿರ್ಯಾಸತೈಲ ದೀಪ (ಹಣ್ಣುಗಳಿಂದ ತಯಾರಿಸಿದ ತೈಲ), ದಧಿಜ ದೀಪ, ಅಣುಜ ದೀಪ.
- ತಾಳೆ ಎಣ್ಣೆ, ಸೂರ್ಯಕಾಂತಿಬೀಜದ ಎಣ್ಣೆ, ಸಾಸುವೆ ಎಣ್ಣೆ ಮುಂತಾದ ತಾಮಸ ಎಣ್ಣೆಗಳಿಂದ ದೀಪ ಹಚ್ಚಬಾರದು.
- **ದೀಪದ ಪಾತ್ರೆಯು ಆರು ವಿಧ :**

  ಸುವರ್ಣ, ಮರ (ಕಟ್ಟಿಗೆ), ಲೋಹ (ರಜತ, ಕಬ್ಬಿಣ, ತಾಮ್ರ, ಸೀಸ, ಸ್ಟೀಲ್), ಮೃತ್ತು (ಮಣ್ಣಿನ), ನಾರಿಕೇಲ ಕರಟ, ತಾಳೆಯ ಕರಟ ಇವುಗಳಿಂದ ನಿರ್ಮಿತವಾದ ದೀಪಗಳು.
- ಅಸ್ಥಿಗಳಿಂದ, ಗೋಮಯದ, ದುರ್ಗಂಧವುಳ್ಳ ಪಾತ್ರೆಗಳಲ್ಲಿ ದೀಪ ಹಚ್ಚಬಾರದು.
- ಸುವರ್ಣ, ರಜತ - ಉತ್ತಮವಾದ ವರ್ಗ, ಹಿತ್ತಾಳೆ, ತಾಮ್ರ, ಕಂಚು, ಮಣ್ಣು - ಮಧ್ಯಮ ವರ್ಗ,ಕಬ್ಬಿಣ, ಸ್ಟೀಲ್, ಮರ - ಅಧಮ ವರ್ಗದ ದೀಪದ ಪಾತ್ರೆಗಳು.
- ದೀಪವನ್ನು ಹಚ್ಚುವಾಗ ಘಂಟಾನಾದಪೂರ್ವಕವಾಗಿರಬೇಕು.
- **ದೀಪದ ಬತ್ತಿಯು ಐದು ವಿಧ** - ಪದ್ಮಸೂತ್ರ ವರ್ತಿ, ದರ್ಭಸೂತ್ರ ವರ್ತಿ, ಸಣಬಿನ ಸೂತ್ರವರ್ತಿ, ತೆಂಗು, ಇತರ ಕಾಯಿಯ ಸಿಪ್ಪೆಯ ವರ್ತಿ, ಹತ್ತಿಕಾಯಿ ಬತ್ತಿ.
- **ಅಷ್ಟವರ್ತಿಗಳು:** ಕಾರ್ಪಾಸ (ಹತ್ತಿ), ಅಕ್ಷತೋಯ, ಶಾಲ್ಮಲೀ, ಕ್ಷೀರಜ (ಹಾಲು ಕುರಟಗೆ), ಅಂಭೋಜ (ಕಮಲದ ದಾರ), ಕುಟಿಜ (ಮಲ್ಲಿಗೆ ದಾರ), ಕಾಶ (ಜಂಬು ಹುಲ್ಲು), ತೂಲ (ಹತ್ತಿ ವಿಶೇಷ). ಇದರ ಜೊತೆ ರೇಷ್ಮೆದಾರ, ಕಣಿಗಲೆದಾರವನ್ನು ಸೇರಿಸಬೇಕು. ಇವುಗಳಲ್ಲಿ ಹತ್ತಿಯ ಬತ್ತಿ ದೀಪವು ಶ್ರೇಷ್ಠವೆನಿಸಿದೆ.
- ಬತ್ತಿಯನ್ನು ತಯಾರಿಸುವಾಗ ಬಲಭಾಗದಲ್ಲಿ ತಿರುಗಿಸಿಯೇ ತಯಾರಿಸಬೇಕು.

- **ದೀಪದ ಲಕ್ಷಣ :** ಕಣ್ಣಿಗೆ ಆಹ್ಲಾದಕರವಾಗಿದ್ದು, ತಾಪದಾಯಕವಾಗದೆ, ಜ್ವಾಲೆಗಳಿಂದ ಕೂಡಿದ್ದಾಗಿ, ಶಬ್ದವಿಲ್ಲದೆ (ಚಟಪಟ ಶಬ್ದ), ಹೊಗೆ ಇರದ ಚಿಕ್ಕದಾಗಿರದಂತಹದ್ದಾಗಿರಬೇಕು.
- **ನಿಷಿದ್ಧ ಬತ್ತಿಗಳು :** ಉಣ್ಣೆಯ ವಸ್ತ್ರ ರೇಷ್ಮೆ ವಸ್ತ್ರ ಬಟ್ಟೆಯ ಚೂರುಗಳಿಂದಾಗಿರಬಾರದು.
- ದೀಪಕ್ಕೆ ಮಿಶ್ರಣದ ತೈಲಗಳನ್ನು ಉಪಯೋಗಿಸಬಾರದು. ಇದು ನರಕ ಪ್ರಾಪಕ.
- **ದೀಪದ ದಿಕ್ಕುಗಳು -** ಪೂರ್ವಕ್ಕೆ ಅಭಿಮುಖವಾಗಿ ಆಯುಷ್ಯ ಅಭಿವೃದ್ಧಿ.
  ಪಶ್ಚಿಮಕ್ಕೆ ಅಭಿಮುಖವಾಗಿ ದುಃಖಪ್ರಾಪ್ತಿ
  ಉತ್ತರಕ್ಕೆ ಅಭಿಮುಖವಾಗಿ ಸಂಪತ್ತು ಪ್ರಾಪ್ತಿ
  ದಕ್ಷಿಣಕ್ಕೆ ಅಭಿಮುಖವಾಗಿ ಜ್ಞಾನನಾಶಕ.
- ದೀಪಗಳನ್ನು ಹಚ್ಚಿ ನೆಲದ ಮೇಲಿಡಬಾರದು. ಮರದ (ಲೋಹದ ಹಲಗೆ) ಅಥವಾ ಪೀಠದ ಮೇಲೆ, ದೀಪಸ್ತಂಭ ಪೀಠದ ಮೇಲಿಡಬೇಕು. ನೆಲದ ಮೇಲಿಟ್ಟರೆ 'ತಪ್ತತಾಮ್ರ'ವೆಂಬ ನರಕದಲ್ಲಿ ಬೀಳುವ.
- ದೀಪವನ್ನು ಹಚ್ಚುವಾಗ ದೀಪದ ಬತ್ತಿಯನ್ನು, ಎಣ್ಣೆಯನ್ನು ಮುಟ್ಟಬಾರದು. ಬೇರೆ ಸಾಧನಗಳಾದ ಕಾಷ್ಠ ಶಲಾಕಾಗ್ರಾದಿಗಳಿಂದ ದೀಪ ಹಚ್ಚಬೇಕು. ಹಾಗೆ ಮುಟ್ಟಿದರೆ ಸಚೇಲ ಸ್ನಾನ ಮಾಡಬೇಕು. ಪೂಜೆ ಮಾಡುವಾಗ ಮುಟ್ಟಿದರೆ ಸ್ನಾನ, ಆಚಮನದಿಂದ ಶುದ್ಧಿಯು.
- ದೀಪದಿಂದ ಇನ್ನೊಂದು ದೀಪವನ್ನು ಹಚ್ಚಬಾರದು. ಬೇರೊಂದು ಬತ್ತಿ ಕಾಷ್ಟ ಶಲಾಕಾದಿಂದ ಹಚ್ಚಬೇಕು. ದೀಪದಿಂದ ಇನ್ನೊಂದು ದೀಪ ಹಚ್ಚಿದರೆ ದಾರಿದ್ರ್ಯ ವ್ಯಾಧಿಗಳು ಬರಬಹುದು.
- ದೇವರ ಮುಂದಿರುವ ದೀಪವನ್ನು ಎಂದೂ ಆರಿಸಬಾರದು.
- ದೇವರ ಮುಂದಿರುವ ದೀಪವನ್ನು ಕತ್ತಲ ನಿವಾರಣೆಗೆ (ಕರೆಂಟು ಹೋದಾಗ) ಎಂದೂ ಬಳಸಬಾರದು.
- ಕದ್ದರೆ ಅಂಧನಾಗಿ ಹುಟ್ಟುವ. ಆರಿಸಿದರೆ ಒಕ್ಕಣ್ಣನಾಗುವ. ಪುರುಷರು ಆರಿಸಿದರೆ ಜ್ಞಾನ ಹಾಗೂ ವಂಶವನ್ನು ಕತ್ತರಿಸಿದಂತೆ, ಸ್ತ್ರೀಯರಾದರೆ ವಂಶಭೇದವಾಗಲು ಕಾರಣವಾಗುತ್ತದೆ.
- ತುಪ್ಪದ ದೀಪದಿಂದ ಬರುವ ಹೊಗೆ ಅನೇಕ ರೋಗ ಪರಿಹಾರಕ, ತಿಲ ತೈಲದ ದೀಪ ವಾತವನ್ನು ಹೋಗಲಾಡಿಸುತ್ತದೆ.
- ತುಪ್ಪ ಹಾಗೂ ತಿಲತೈಲದೊಳಗೆ ಗುಡೂಚಿ, ಶತಾವರೀ ರೋಚನಗಳ ಮಿಶ್ರಣದಿಂದ ನಾರಾಯಣತೈಲ ಸಿದ್ಧವಾಗುತ್ತದೆ.
- ಪುರುಷರು ದೀಪ ಆರಿಸಿದರೆ ವಂಶಭೇದವಾಗಲು ಕಾರಣವಾಗುವುದು. ಸ್ತ್ರೀಯರು ಕೂಷ್ಮಾಂಡ ಕತ್ತರಿಸುವುದು ಸಂತಾನ ಭಂಗವಾದಂತೆ.
- ದೀಪವನ್ನು ಯಾವಾಗಲಾಗಲಿ ಹಚ್ಚುವಾಗ ಹೊಸಬತ್ತಿಯನ್ನೇ ಉಪಯೋಗಿಸಬೇಕು. (ನಂದಾದೀಪಾದಿಗಳನ್ನು ಹೊರತುಪಡಿಸಿ).
- ದೀಪದಲ್ಲಿ ಬತ್ತಿಗಳ ಸಂಖ್ಯೆ : ಎರಡು ಹೂ ಬತ್ತಿಗಳಿರಬೇಕು. 3, 4, 5, 7 ... ಮಂಗಳಾರತಿ ಬತ್ತಿಗಳಿರಬೇಕು.

- ದೇವರ ದೀಪವನ್ನಾಗಲೀ, ದೀಪದ ಎಣ್ಣೆಯನ್ನಾಗಲೀ ಕದ್ದವರಿಗೆ ಕುಷ್ಠರೋಗ ಬರುತ್ತದೆ.
- ಎರಡು, ಐದು, ಏಳು ಹೀಗೆ ದೀಪಗಳನ್ನು ಹಚ್ಚಬೇಕು. ಅನುಕೂಲವಿದ್ದವರು ಎಷ್ಟು ದೀಪಗಳನ್ನಾದರೂ ಹಚ್ಚಬಹುದು. ದೀಪದ ಬೆಳಕಿನ ವ್ಯಾಪ್ತಿಯಂತೆ ಭಗವಂತ ಅನಂತ ವ್ಯಾಪ್ತ ರೂಪಗಳನ್ನು ಚಿಂತಿಸಲು ಸಾಧ್ಯ.
- ಒಂದು ಕಡೆ ಹಚ್ಚಿಟ್ಟ ದೀಪವನ್ನು ಇನ್ನೊಂದು ಕಡೆಗೆ ಒಯ್ಯದೆ ಪ್ರತ್ಯೇಕದೀಪವನ್ನೇ ಹಚ್ಚಬೇಕು.
- ತುಪ್ಪದ ದೀಪವನ್ನು ಒಂದು ನಿಮಿಷವಾಗಲಿ ಹಚ್ಚಿದಲ್ಲಿ ಅನೇಕ ವರ್ಷಗಳ ಕಾಲ ವಿಷ್ಣು ಲೋಕದಲ್ಲಿ ಮೆರೆಯುವ.
- ನಿತ್ಯ ದೀಪ ಬೆಳಗಿ ಭಗವಂತನಿಗೆ ಸಮರ್ಪಿಸುವುದರಿಂದ ರಾಜಯೋಗ, ಸಂಪತ್ತಿನ ಯೋಗ, ಸದ್ಜ್ಞಾನ ಪ್ರಾಪ್ತಿ, ಸಕಲ ಪಾಪ ಪರಿಹಾರಕ ಕಡೆಗೆ ವಿಷ್ಣುಲೋಕ ಪ್ರಾಪ್ತಿಯು.
- ದೀಪದಾನದಿಂದ ಉತ್ತಮವಾದ ಕಣ್ಣುಗಳು ಪ್ರಾಪ್ತವಾಗುತ್ತದೆ. ಜ್ಞಾನವು ಬೆಳೆಯುತ್ತದೆ.
- ದೀಪದಲ್ಲಿ ಬತ್ತಿ, ಎಣ್ಣೆ ಅಗ್ನಿಯು ಜ್ಞಾನ ಭಕ್ತಿ ಕರ್ಮಗಳ ಸಂಕೇತವಾಗಿರುತ್ತದೆ.
- ದೀಪಸ್ತಂಭದಲ್ಲಿ 27 ನಕ್ಷತ್ರ ದೇವತೆಗಳ ಸನ್ನಿಧಾನವಿರುತ್ತದೆ. ನಾಳದಲ್ಲಿ ವಾಸುಕಿ, ಪಾದದಲ್ಲಿ ಚಂದ್ರ ಸೂರ್ಯರು, ಧೂಪ ದೀಪ ಪಾತ್ರೆಯಲ್ಲಿ ಅಗ್ನಿದೇವರು.
- **ದೀಪದಾನ ಮಂತ್ರ:** ದೀಪಸ್ತಮೋನಾಶಯತಿ ದೀಪಃಕಾಂತಿಂ ಪ್ರಯಚ್ಛತಿ<br>ತಸ್ಮಾತ್ ದೀಪಪ್ರದಾನೇನ ಮಮ ವಂಶಪ್ರವರ್ಧನಮ್ ।<br>ದೀಪೋ ಜ್ಞಾನಪ್ರದೋ ನಿತ್ಯಂ ದೇವತಾನಾಂ ಪ್ರಿಯಸ್ಸದಾ<br>ದಾನೇನಾಸ್ಯ ಭವೇತ್ ಸೌಖ್ಯಂ ಶಾಂತಿರ್ಮೇ ವಾಂಛಿತಂ ಫಲಮ್ ॥
- **ಲಕ್ಷ್ಮೀ ದೀಪದಾನ ಮಂತ್ರ:** ಘೃತಾಕ್ತವರ್ತಿ ಸಂಯುಕ್ತಮಂಧಕಾರ ವಿನಾಶಕಂ ।<br>ದೀಪಂ ದಾಸ್ಯಾಮಿ ತೇ ದೇವಿ ಗೃಹಾಣ ಮುದಿತಾ ಭವ ।
- **ಆಕಾಶ ದೀಪದಾನ ಮಂತ್ರ :** ದಾಮೋದರಾಯ ನಭಸಿ ತುಲಾಯಾಂ ದೋಲಾಯಾ ಸಹ ।<br>ಪ್ರದೀಪಂ ತೇ ಪ್ರಯಚ್ಛಾಮಿ ನಮೋಽನಂತಾಯ ವೇಧಸೇ ॥
- **ದೀಪದಲ್ಲಿರುವ ದೇವತೆಗಳು:** ದೀಪದ ಪಾತ್ರೆಯಲ್ಲಿ - ಬ್ರಹ್ಮದೇವರು, ತೈಲದಲ್ಲಿ - ಲಕ್ಷ್ಮೀದೇವಿ, ಬತ್ತಿಯಲ್ಲಿ - ವಾಸುದೇವ ಸಂಕರ್ಷಣ, ಬಿಳುಪಿನಲ್ಲಿ - ವಾಯುದೇವರು ಕಪ್ಪಿನಲ್ಲಿ - ರುದ್ರದೇವರು, ಕೆಂಪಿನಲ್ಲಿ - ಇಂದ್ರದೇವರು.
- ಹಲಗಾರತಿ ಪಾತ್ರೆಯ ಮುಂದೆ (ದೀಪ ಹಚ್ಚುವಲ್ಲಿ) ಅಗ್ನಿ, ದಂಡದಲ್ಲಿ ರುದ್ರ, ಹಿಂಭಾಗದಲ್ಲಿ ಪ್ರಜಾಪತಿ ಇರುವರು.
- **ದೀಪ ಹಚ್ಚುವಾಗ :** (ಗಂಟೆ ಬಾರಿಸುತ್ತಾ)<br>ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ಹವ್ಯವಾಡ್ ಜುಹ್ವಾಸ್ಯಃ ।<br>ನೀರಾಜನಂ ಸ್ವೀಕುರು ದೇವ ದೇವ ನೀಲೋತ್ಪಲಶ್ಯಾಮಲ ನೀರಜಾಕ್ಷ ।<br>ಸ್ವಮಾಯಯಾ ಲಾಲಿತ ಜ್ಞಾನಪದ್ಮ ಜ್ಞಾನಪ್ರದೀಪಂ ಕುರು ಮೇ ನಮೋಽಸ್ತು ॥

- **ದೀಪ ಹಚ್ಚಲು ಸಕಾಲ :** ಕಾರ್ತೀಕ ಮಾಸದ ದಿನಗಳು, ಹುಣ್ಣಿಮೆ ಅಮಾವಾಸ್ಯೆ ಚತುರ್ದಶಿ, ಪ್ರದೋಷ ಸಮಯ, ಪ್ರಾತಃಕಾಲ, ಸಾಯಂಕಾಲ ಪೂಜೆಯ ನೈವೇದ್ಯದ ಮುಂಚೆ, ಸದಾ ಕಾಲ ಮನೆಯಲ್ಲಿ ದೇವಾಲಯಗಳಲ್ಲಿ ನಂದಾದೀಪ ಇರಬೇಕು.
- ಕಾರ್ತೀಕಮಾಸದಲ್ಲಿ ದೀಪದಾನ ಶ್ರೇಷ್ಠತಮ. ದಾಮೋದರನ ಪ್ರೀತಿಗಾಗಿ ದಾನ ಮಾಡಬೇಕು.
- ಚಾತುರ್ಮಾಸ್ಯದಲ್ಲಿ ವ್ರತಲೋಪವಾಗಿದ್ದಲ್ಲಿ ದೀಪದಾನದಿಂದ ನಿವಾರಣೆಯಾಗುತ್ತದೆ.
- ಜ್ಞಾನಪೂರ್ವಕ ಶ್ರದ್ಧಾಭಕ್ತಿಗಳಿಂದ ಶ್ರೋತ್ರೀಯನಿಗೆ ಕಾರ್ತೀಕಮಾಸದಲ್ಲಿಯ ದೀಪದಾನ ಮೋಕ್ಷಸಾಧನ.
- ತುಪ್ಪದ ದೀಪ ಹಚ್ಚಿ ದಾನ ಮಾಡುವುದರಿಂದ ಅಶ್ವಮೇಧ ಯಾಗ ಫಲ, ಪಾಪರಾಶಿ ನಾಶ ವೈಷ್ಣವಜನ್ಮ ಪ್ರಾಪ್ತಿ.
- ಕಾರ್ತೀಕ ಮಾಸದಲ್ಲಿ ಇತರರಿಗೆ ಬೋಧಿಸಿ ದೀಪ ಹಚ್ಚಿಸಿದರೂ ಅನಂತ ಫಲವಿದೆ. ಆರುತ್ತಿರುವ ದೀಪವನ್ನು ಉರಿಯುವಂತಾಗಿಸಿದರೂ ಫಲವಿದೆ.
- ಕಾರ್ತೀಕ ಮಾಸದಲ್ಲಿ ತ್ರಯೋದಶಿಯಂದು ಹಚ್ಚುವ ಯಮದೀಪದಿಂದ ಅಪಮೃತ್ಯು ಪರಿಹಾರ.
- ಕಾರ್ತೀಕ ಮಾಸದಲ್ಲಿ ಆಕಾಶದೀಪ ಇಡುವವನು ತನ್ನ ನೂರು ಕುಲಗಳನ್ನು ಉದ್ಧರಿಸುವನು.
- ತಿಲತೈಲವನ್ನು ಉಪಯೋಗಿಸಿ ಹಚ್ಚುವುದರಿಂದ ಸುಂದರಾಂಗನಾಗಿ ಬಹುಕಾಲ ಸುಖಿಸುವ.
- ದೀಪದಾನದಿಂದ ಬ್ರಹ್ಮಹತ್ಯಾದಿ ದೋಷಗಳು ಪರಿಹಾರ.
- ಕಾರ್ತೀಕ ಮಾಸದಲ್ಲಿ ತುಲಸಿ ಸಮೀಪ ದೀಪ ಹಚ್ಚಿದರೆ ಅವರಿಗೆ ವಿಷ್ಣುಲೋಕ ಪ್ರಾಪ್ತಿ.
- ಲಕ್ಷ ದೀಪ ವ್ರತಕ್ಕೆ ಅವರೇ ಬತ್ತಿಯಿಂದ ಮಾಡಿ ಹಚ್ಚಿದರೆ ವಿಶೇಷ ಫಲವಿದೆ. ಈ ದೀಪಾರಾಧನೆ ಶ್ರೇಷ್ಠವಾದದ್ದು.
- ಮೂರು ಬತ್ತಿಗಳಿಂದ ಏಕಾರತಿ (ಪೂಜಾಕಾಲದಲ್ಲಿ) ಮಾಡಿ ನಂದಿಸಬೇಕು. ಈ ಹೊಗೆಯನ್ನು ದೇವತೆಗಳು ಆಘ್ರಾಣಿಸುವರು. ಈ ಮೂರು ಬತ್ತಿಗಳಲ್ಲಿ ವಿಶ್ವ, ತೈಜಸ, ಪ್ರಾಜ್ಞ ನಿಯಾಮಕ ರೂಪಗಳು. ಮಂಗಳಾರತಿ ಬತ್ತಿಗಳು ಆರಿದ ಮೇಲೆ ಹೊಗೆಬಾರದಂತೆ ನೋಡಿಕೊಳ್ಳಬೇಕು.
- ಶುದ್ಧವಾದ ಕರ್ಪೂರದಿಂದ ಮಾಡುವ ಆರತಿಯೂ ಶ್ರೇಷ್ಠವಾದದ್ದು.
- **ಕೋಟಿದೀಪ** ಹಚ್ಚುವುದು ಭಗವಂತನಿಗೆ ಅತಿ ಶ್ರೇಷ್ಠವಾದ ವಿಧಿ. ಆಗದಿದ್ದಲ್ಲಿ ಅರ್ಧಕೋಟಿ, ಕಾಲು ಕೋಟಿಯಾದರೂ ದೀಪ ಹಚ್ಚಬೇಕು. ಜೀವಿತ ಕಾಲದಲ್ಲಿಯ ಈ ಸಮರ್ಪಣೆ ಸರ್ವಸಿದ್ಧಿಪ್ರದವೆಂದು ರುದ್ರದೇವರು ಹೇಳಿರುವರು. ಈ ವ್ರತಕ್ಕೆ ಉದ್ಯಾಪನೆ ಇದೆ.
- **ಲಕ್ಷ ಬತ್ತಿ ವ್ರತ:** ಲಕ್ಷ ಬತ್ತಿ ಹಚ್ಚಿ ಶ್ರೀ ವಿಷ್ಣುವಿಗೆ ಸಮರ್ಪಣೆ ಮಾಡುವುದರಿಂದ ಸರ್ವ ವಿಧವಾದ ದೋಷಗಳು ನಿವಾರಣೆಯಾಗುತ್ತದೆ.

**ದೀಪದ ಆಧ್ಯಾತ್ಮ :** ಈ ಸಾಧನ ಶರೀರ - ಪ್ರಣತಿ, ಜೀವನು ಮಾಡುವ ಕರ್ಮಗಳೇ-ಬತ್ತಿ ಸ್ನೇಹರೂಪದ ಭಕ್ತಿಯು-ಎಣ್ಣೆ, ಜ್ಞಾನರೂಪವೇ-ಜ್ಯೋತಿ, ಬತ್ತಿಯಂತೆ ಕರ್ಮಗಳನ್ನು ಕಳೆಯುತ್ತ ಈ ಶರೀರವು ನಿರ್ಮಲ, ಪ್ರವಾಹ ರೂಪದ ಭಕ್ತಿಯನ್ನು ಜ್ಞಾನಪೂರ್ವಕ ಭಗವಂತನಿಗೆ ಅರ್ಪಿಸಿದಾಗ ಅವನ ಅನುಗ್ರಹ ಪಡೆದು ಪರಂಜ್ಯೋತಿಯ ಪಾದದಡಿ ಸೇರುವ.

# ಶ್ರೀತುಳಸೀ ವೈಭವ

ಯಾ ದೃಷ್ಟಾನಿಖಿಲಾಘಸಂಘಶಮನೀ ಸ್ಪೃಷ್ಟಾವಪುಃ ಪಾವನೀ ।
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ॥
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ।
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

## ತುಲಸಿಯಲ್ಲಿ ಸನ್ನಿಹಿತ ವಿವಿಧ ಭಗವದ್ರೂಪಗಳು

| | | |
|---|---|---|
| 1. | ಮಧ್ಯದಲ್ಲಿ | ವಿಷ್ಣುವಿನ ಸನ್ನಿಧಾನ |
| 2 | ಬಲಭಾಗದಲ್ಲಿ | ರುದ್ರ |
| 3 | ಎಡಭಾಗದಲ್ಲಿ | ಬ್ರಹ್ಮ |
| 4 | ಮೂಲದಲ್ಲಿ | ನಾರಾಯಣ |
| 5 | ಶೀರ್ಷದಲ್ಲಿ | ಜನಾರ್ದನ |
| 6 | ಶಾಖಾದಲ್ಲಿ | ಸರ್ವದೇವತೆಗಳು |
| 7 | ಉಪಶಾಖಾದಲ್ಲಿ | ಸಸೂತ್ರಕ - ಸಾಂಗವೇದ |
| 8 | ಶಾಖೋಪಶಾಖಾಮಧ್ಯದಲ್ಲಿ | ಮುನಿಗಳು |
| 9 | ಮಂಜರಿಯಲ್ಲಿ | ಲಕ್ಷ್ಮೀ |
| 10 | ಪುಷ್ಪದಲ್ಲಿ | ಪುರುಷೋತ್ತಮ |
| 11 | ಪತ್ರದಲ್ಲಿ | ಅಪ್ಸರಗಣ |
| 12 | ಪತ್ರಾಗ್ರದಲ್ಲಿ | ಸರ್ವತೀರ್ಥ |
| 13 | ಪತ್ರಶಾಖಾಂತರದಲ್ಲಿ | ಗಂಗಾ |
| 14 | ದಳಗಳಲ್ಲಿ | ಸಪ್ತಸಾಗರ |
| 15 | ಆಮೂಲಾಗ್ರ | ಶ್ರೀಹರಿ |

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥

ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥

- ಮುಂಜಾನೆ ಎದ್ದ ಕೂಡಲೇ ತುಲಸಿಯ ದರ್ಶನವನ್ನು ಮಾಡಬೇಕು
- ಮುಖಮಾರ್ಜನಾದಿಗಳನ್ನು ಪೂರೈಸಿ ತುಲಸಿ ಮೃತ್ತಿಕೆಯನ್ನು ಹಣೆಯ ಮೇಲೆ ಪುರುಷರು ಧರಿಸಬೇಕು.
- ಮನೆಯಿಂದ ಹೊರಹೊರಡುವಾಗ ತುಳಸೀಗಿಡದ ದರ್ಶನ, ಪ್ರದಕ್ಷಿಣೆ ಮಾಡುವುದು.
- ಸ್ತ್ರೀಯರು ತಮ್ಮ ಗುರುಮಂತ್ರಾದಿಗಳನ್ನು ಪೂರೈಸಿ ವಿಧಿವತ್ತಾಗಿ ತುಳಸೀ ಪೂಜೆಯನ್ನು ಮಾಡಬೇಕು.
- ಸ್ತ್ರೀಯರು ತುಳಸಿಯನ್ನು ಮುಟ್ಟಬಹುದು,ಆದರೆ ಕೀಳಬಾರದು.
- ಯತಿಗಳು ತುಳಸಿಯನ್ನು ಬಿಡಸಬಾರದು.
- ಹೊಸವಸ್ತ್ರಧರಿಸಿ, ಸ್ನಾನವಿಲ್ಲದೆ (ಅಭ್ಯಂಜನಸ್ನಾನಮಾಡಿದ್ದರೂ) ತುಳಸಿಯ ಕೀಳಬಾರದು.
- ದ್ವಾದಶೀಯಂದು ನಿಷಿದ್ಧ ದಿನಗಳಲ್ಲಿ ತುಳಸಿ ಆಹರಣ ನಿಷಿದ್ಧ. (ಸಂಧ್ಯಾಕಾಲ, ರಾತ್ರಿ, ಅಶೌಚವಿರುವಾಗ, ಸ್ನಾನಮಾಡದೆ, ಪೂರ್ಣಿಮಾ-ಅಮಾವಾಸ್ಯೆಯಂದು, ಗ್ರಹಣಕಾಲ ದಲ್ಲಿ, ಊಟದನಂತರ, ಭಾನು-ಮಂಗಳ-ಶುಕ್ರವಾರಗಳಲ್ಲಿ, ಅಶುಚಿಯಾಗಿ ತುಲಸಿ ಕೀಳಬಾರದು.)
- ಉಗುರು ತಾಕದಂತೆ, ರೆಂಬೆಗಳು ಮುರಿಯದಂತೆ, ಮಂತ್ರಪಠಿಸುತ್ತಾ ಚಪ್ಪಾಳೆ ತಟ್ಟಿ ನಿಧಾನವಾಗಿ ಕೀಳುವುದಾಗಿ ಕ್ಷಮೆಯಾಚಿಸಿ ದಳಗಳನ್ನು ಕೀಳಬೇಕು.
- ತುಳಸಿಯನ್ನು ಪೂರ್ವ ಅಥವಾ ಉತ್ತರ ಮುಖವಾಗಿ ಸ್ತೋತ್ರ ಪಠಿಸುತ್ತಾ ಕೀಳಬೇಕು.
- ತುಳಸಿ ಕೀಳುವಾಗ ರಾಮಕೃಷ್ಣರ ಸ್ಮರಣೆ ಮಾಡಲೇಬೇಕು ಜೊತೆಗೆ ಸ್ತೋತ್ರಗಳ ಪಠನ.
- ರಜಸ್ವಲೆಯರ ನೆರಳು ತುಳಸೀಗಿಡದ ಮೇಲೆ ಬೀಳಬಾರದು. ಅಂತಹವರು ಸ್ಪರ್ಶಿಸಬಾರದು.
- ತುಲಸೀರಹಿತ ಪೂಜೆಯನ್ನು, ನೈವೇದ್ಯವನ್ನು ಭಗವಂತ ಸ್ವೀಕರಿಸ.
- ತುಳಸಿಯಲ್ಲಿ ಭಗವಂತನ 5317ರೂಪಗಳನ್ನಿರಿಸಿರುವನು. ಅದಕ್ಕೆ ಶ್ರೇಷ್ಠ ಪತ್ರವೆನಿಸಿದೆ.
- ತುಳಸಿಯಲ್ಲಿ ಸಕಲ ತೀರ್ಥಗಳ, ಕ್ಷೇತ್ರದೇವತಾ ಸನ್ನಿಧಾನವಿರುತ್ತದೆ.
- ತುಳಸಿಯು ಅಲಭ್ಯವಿದ್ದಾಗ ಬರೆ ಒಣಗಿದ ಎಲೆ, ಕೊಂಬೆ, ಕಾಷ್ಟ, ಮೃತ್ತಿಕೆ ಇಂದಲಾದರೂ ಪೂಜಿಸಬೇಕು. ಹಿಂದಿನ ದಿನಗಳ ತುಳಸಿಯನ್ನು ತೊಳೆದು ಉಪಯೋಗಿಸಬಹುದು. ಏನೂ ಇಲ್ಲದಿದ್ದಲ್ಲಿ ತುಳಸೀ, ತುಳಸೀ ಎಂದು ಮೂರು ಬಾರಿ ಉಚ್ಚಾರಣೆಯನ್ನಾದರು ಮಾಡಬೇಕು.
- ತುಳಸಿಗಿಡದಿಂದ ತಂದ ತುಳಸಿಯನ್ನು ಹೂವಿನಂತೆ ತೊಳೆದು ಪೂಜಿಸಬಾರದು.
- ತುಳಸಿಯನ್ನು ಪ್ರತ್ಯೇಕವಾಗಿ ಹೂವುಗಳೊಂದಿಗೆ ಸೇರಿಸದೆ ತರಬೇಕು, ಇಡಬೇಕು. ವಸ್ತ್ರ ದಲ್ಲಿ, ಕೈಯಲ್ಲಿತರಬಾರದು. ಕೀಳುವಾಗ-ತರುವಾಗ ತುಳಸಿಯ ವಾಸನೆ ನೋಡಬಾರದು.

- ತುಲಸಿಗಿಡದ ಸಮೀಪ ಹೋಗುವಾಗ, ಗಿಡಕ್ಕೆ ನೀರನ್ನು ಹಾಕುವಾಗ, ಪ್ರೋಕ್ಷಣೆ ಮಾಡುವಾಗ, ಪ್ರದಕ್ಷಿಣೆ ಹಾಕುವಾಗ, ಮೃತ್ತಿಕಾಧಾರಣೆ ಮಾಡುವಾಗ, ತುಲಸ್ಯಾಹರಣ ಮಾಡುವಾಗ, ತುಲಸೀಮಾಲೆ ಧರಿಸುವಾಗ ಇರುವ ಮಂತ್ರಗಳನ್ನು ಪಠಿಸುತ್ತಾ ಆಚರಿಸಬೇಕು.
- ತುಳಸೀದಳ ಸಮರ್ಪಣೆ ಎಂದರೆ ಅನಂತ ಸುವರ್ಣಪುಷ್ಪ ಸಮರ್ಪಣೆಗೆ ಸಮಾನ.
- ಸ್ತ್ರೀಯರು ತುಳಸೀಗಿಡಕ್ಕೆ ನೀರನ್ನು ಹಾಕುವಾಗ ಅಲ್ಲಿ ಕೃಷ್ಣ ಪ್ರತಿಮೆಯನ್ನಿಟ್ಟಿರಬೇಕು.
- ತುಳಸೀ ಸಮರ್ಪಿಸುವಾಗ ವಿಷ್ಣುಸಹಸ್ರನಾಮ, ಬ್ರಹ್ಮಸೂತ್ರಗಳು, ಕೇಶವಾದಿ ನಾಮಗಳ ಪಠನ ಮಾಡುವುದು.
- ತುಳಸೀ ಪತ್ರವನ್ನು ಸಾಲಿಗ್ರಾಮ, ವಿಷ್ಣುರೂಪ ಪ್ರತಿಮೆಗಳಿಗೆ ಮಾತ್ರ ಅರ್ಪಿಸಬೇಕು. ಇತರ ದೇವತೆಗಳಿಗೆ ನಿರ್ಮಾಲ್ಯವನ್ನು ಸಮರ್ಪಿಸಬೇಕು.
- ಏಕಾದಶಿ ತಿಥಿ, ಕೃಷ್ಣಾಷ್ಟಮಿಯಂದು ತುಳಸೀ ಭಕ್ಷಣ ಮಾಡಬಾರದು. ನಿತ್ಯದಲ್ಲೂ ತುಳಸೀ ಸಹಿತ ತೀರ್ಥಪ್ರಾಶನ ಮಾಡುವುದು.
- ಕಂಠದಲ್ಲಿ ತುಳಸಿಮಣಿ, ಶಿರ ನಾಭಿ ಹಾಗೂ ಕಿವಿಯಲ್ಲಿ ತುಳಸೀದಳ ಇಡುವುದು ಶ್ರೇಷ್ಠ
- ಭಗವಂತನಿಗೆ ಏನನ್ನೇ ಸಮರ್ಪಿಸುವಾಗಲೂ ತುಳಸೀ ಸಹಿತವಾಗಿ ಶಂಖಕ್ಕೆ ತಾಕಿಸಿ ಅರ್ಪಿಸಬೇಕು.
- ದೇವದಾನವರು ಸಮುದ್ರಮಥನ ಮಾಡುವಾಗ ತುಳಸಿ ಅಮೃತಕಲಶದಿಂದ ಜನಿಸಿದಳು.
- ತುಳಸಿಯು ಲಕ್ಷ್ಮೀಯ ನಿತ್ಯ ಸನ್ನಿಧಾನಯುಕ್ತಳಾದವಳು.
- ವಿಶೇಷವಾಗಿ ಕಾರ್ತೀಕಶುದ್ಧದ್ವಾದಶಿಯಿಂದ ಶ್ರೀಕೃಷ್ಣನೊಂದಿಗೆ ತುಲಸೀವಿವಾಹ ಉತ್ಸವ ನಡೆಸುವುದು ಪರಂಪರಾಗತವಾಗಿದೆ.
- ತುಳಸಿಯ ಬಗ್ಗೆ ಪದ್ಮ, ಸ್ಕಂದ, ಕಾರ್ತೀಕ ಮಾಸಮಾಹಾತ್ಮ್ಯೆ ಬ್ರಹ್ಮವೈವರ್ತ, ವಿಷ್ಣುಪುರಾಣ ಮುಂತಾದ ಕಡೆಗಳಲ್ಲಿ ವಿವರಗಳು ಸಿಗುತ್ತದೆ.
- ಆಯುರ್ವೇದದಲ್ಲಿ ತುಳಸಿಯನ್ನು ಸಂಜೀವಿನಿ ಎಂದು ಕರೆದು ಔಷಧಿ ಎಂದಿರುವರು.
- ವಿವಿಧ ತುಳಸಿಗಿಡಗಳಲ್ಲಿ ಕೃಷ್ಣತುಳಸಿಯು ಶ್ರೇಷ್ಠವಾದದ್ದು.
- ತುಳಸೀಮಣಿ ಮಾಲೆ ಧರಿಸುವುದು ತುಳಸಿಮಾಲೆಯಿಂದ ಜಪಿಸುವುದು ಫಲದಾಯಕ.
- ತುಳಸಿಯು ಸ್ವಯಂ ಲಕ್ಷ್ಮೀದೇವಿ, ಜಾಂಬವತೀ, ಸಾಧನಸ್ಥೈದ ದೇವತಾ ಸ್ತ್ರೀಯೆಂದು ಪ್ರಸಿದ್ಧಿಯಿದೆ. (ವಿಚಾರಾರ್ಹವಾದುದು).

**'ಒಲ್ಲನೋ ಹರಿ ಕೊಳ್ಳನೋ । ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ ॥'-ಪು. ದಾಸರು**

# ವೀಳೆಯ ಎಲೆ (ವಿಳೇದೆಲೆ, ವೀಳ್ಯದೆಲೆ) ಯ ವಿಶೇಷ

ಯಾವುದೇ ಶುಭಕಾರ್ಯಗಳಲ್ಲಿ ಆಮಂತ್ರಿಸಲು, ಕಾರ್ಯಾನಂತರ, ಭೋಜನದ ನಂತರ, ಕೆಲಸಕಾರ್ಯಗಳನ್ನು ವಹಿಸುವಾಗ, ಗುರುಹಿರಿಯರಿಗೆ ಗಣ್ಯರಿಗೆ ಗೌರವಾದರವನ್ನು ತೋರಲು ಸನ್ಮಾನಿಸುವಾಗ ಬಳಸುವ ಸಾತ್ವಿಕ ಎಲೆ ವೀಳೆಯ ಎಲೆ (ನಾಗವಲ್ಲಿ).

ಎಲೆಗಳು ಸರಿಸಂಖ್ಯೆಯದಾಗಿದ್ದು ಅದರೊಂದಿಗೆ ಅಡಿಕೆ ಸುಣ್ಣದ ಸಮೇತ ಕೊಡಬೇಕು. ವಿಶೇಷ ಸಂದರ್ಭಗಳಲ್ಲಿ ದಕ್ಷಿಣೆ ಫಲ ಪುಷ್ಪಗಳನ್ನಿಟ್ಟು ಅರ್ಪಿಸಬೇಕು. ದಾನ ಕೊಡುವ, ಪಡೆಯುವ ಪ್ರಸಂಗಗಳಲ್ಲಿ ಹೀಗೆಯೇ ಇದ್ದಲ್ಲಿ ಮಾತ್ರ ಪೂರ್ಣಫಲ ಪ್ರಾಪ್ತಿ. ಶುಭಸಮಾರಂಭಗಳಲ್ಲಿ ತಾಂಬೂಲವನ್ನು ಹಂಚುವುದು, ಪರಸ್ಪರ ಪಡೆಯುವುದು ಶುಭ ಸೂಚಕ. ಸ್ತ್ರೀಯರಿಗೆ ಕುಂಕುಮ ಅರಿಶಿನದೊಂದಿಗೆ ಕೊಡುವ-ಪಡೆಯುವ ಸಂಪ್ರದಾಯ.

**ವಿಳೇದೆಲೆ ಸೇವಿಸುವಾಗ ತ್ಯಾಜ್ಯಭಾಗ–**

**ಪೂರ್ಣಮೂಲೇ ಭವೇದ್ವ್ಯಾಧಿಃ ಪರ್ಣಾಗ್ರೇ ಪಾಪಸಂಭವಃ ।**
**ಚೂರ್ಣಪರ್ಣಂ ಹರೇದಾಯುಃ ಶಿರಾ ಬುದ್ಧಿವಿನಾಶಿನೀ ॥**
**ತಸ್ಮಾದಗ್ರಂ ಚ ಮೂಲಂ ಚ ಶಿರಾಂಚೈವ ವಿಶೇಷತಃ ।**
**ಚೂರ್ಣಪರ್ಣಂ ವರ್ಜಯಿತ್ವಾ ತಾಂಬೂಲಂ ಭಕ್ಷಯೇತ್ ಸುಧೀಃ ॥**

ವಿಳೇದೆಲೆಯ ಬುಡ, ತುದಿ, ತುಂಬು(ನರ)ಗಳನ್ನು ತೆಗೆದು ಅಡಿಕೆ ಸುಣ್ಣಗಳನ್ನು ತಕ್ಕಷ್ಟು ಸೇರಿಸಿ (ಶುದ್ಧವಾದ ಸುಗಂಧಯುಕ್ತ ಮತ್ತನ್ನುಂಟುಮಾಡದ, ವಸ್ತುಗಳನ್ನು ಸೇರಿಸಿ) ತಿನ್ನಬೇಕು.

- ಗೃಹಸ್ಥರು ಮಾತ್ರ ಸೇವಿಸುವ ವಸ್ತುವಾಗಿದೆ.
- ಒಳ್ಳೆಯ ಜೀರ್ಣಕಾರಿ, ಕಾಮೋದ್ರೇಕ, ಪ್ರಚೋದಕ.
- ಒಮ್ಮೆ ಸ್ವರ್ಗದಲ್ಲಿ ಅಮೃತದೊಂದಿಗೆ ಐರಾವತದ ಮದೋದಕ ಮಿಶ್ರಣಗೊಂಡು ಲತೆ ಹುಟ್ಟಿತು. ಅದರ ಎಲೆಗಳಿಗೆ ನಾಗವಲ್ಲಿ (ವೀಳ್ಯದೆಲೆ) ಎಂದು. ಅದಕ್ಕೆ ಧನ್ವಂತರಿಯು ಅಡಿಕೆ ಹಾಗೂ ಖದಿರ ಸೇರಿಸಿ 'ತಾಂಬೂಲ' ಎಂದು ಕರೆದನು.
- ತಾಂಬೂಲಕ್ಕೆ ಅಭಿಮಾನಿದೇವತೆ ಗಂಗಾದೇವಿ ಮತ್ತು ಶ್ರೀಹರಿ ನಿಯಾಮಕ ಭಗವದ್ರೂಪ
- ಅತಿಯಾದ ತಾಂಬೂಲ ಸೇವನೆ ನಿಷಿದ್ಧವಾಗಿದೆ.
- ವಿಳೇದೆಲೆ ಅಗ್ರದಲ್ಲಿ ಶ್ರೀದೇವಿ, ತುಂಬಿನಲ್ಲಿ ಯಶೋದೇವತೆ, ಮಧ್ಯದಲ್ಲಿ ವಿಷ್ಣು ಸನ್ನಿಹಿತರು.
- ತಾಂಬೂಲವನ್ನು ಸೇವಿಸುವ ಮೊದಲು ಹಾಗೂ ನಂತರ ಆಚಮನ ಮಾಡಬೇಕು.
- ವಿದ್ಯಾರ್ಥಿ-ಬ್ರಹ್ಮಚಾರಿ-ಸಂನ್ಯಾಸಿ-ವಿಧವೆ-ರಜಸ್ವಲೆಯರಿಗೆ ತಾಂಬೂಲಸೇವನೆ ನಿಷಿದ್ಧ
- ಪಿತೃಗಳ ಶ್ರಾದ್ಧದದಿನ, ದಶಮಿಏಕಾದಶೀ ದ್ವಾದಶಿಗಳಂದು, ಸೂತಕ, ಗ್ರಹಣ, ಸಂಕ್ರಮಣಾದಿಗಳಂದು ತಾಂಬೂಲ ಸೇವನೆ ನಿಷಿದ್ಧ
- ಬಾಯಲ್ಲಿ ಎಲೆಯ ನಂತರ ಅಡಿಕೆಯ ಸೇವನೆ ಶಾಸ್ತ್ರವಿಹಿತ. ಭೋಜನದ ನಂತರವೇ ತಾಂಬೂಲ ಚರ್ವಣ ಸೂಕ್ತವಾದದ್ದು. (ಬರೀ ಅಡಿಕೆ ಸೇವನೆ ನಿಷಿದ್ಧವಾದದ್ದು)

# ಕಾಲಾಭಿಮಾನಿ ದೇವತೆಗಳು

**ಸಂವತ್ಸರಗಳು : 60 (ಅಭಿಮಾನಿಗಳು)**

1. ಪ್ರಭವ – ಬಹ್ಮಾ
2. ವಿಭವ – ವಾಯು / ವಿಷ್ಣು
3. ಶುಕ್ಲ – ಶಿವ
4. ಪ್ರಮೋದ – ರುವತಿ / ಗಣೇಶ
5. ಪ್ರಜಾಪತಿ – ಇಂದ್ರ / ಶಕ್ತಿ
6. ಅಂಗೀರಸ – ಇಂದ್ರ / ಕುಮಾರ
7. ಶ್ರೀ ಮುಖ – ಅದಿತಿ / ದಲ್ಲೀ
8. ಭಾವ – ಮನ್ಯು / ಗೌರೀ
9. ಯುವ – ವಹ್ನಿ / ಬ್ರಾಹ್ಮೀ
10. ಧಾತು – ನಿರ್ಋತಿ / ಮಾಹೇಶ್ವರೀ
11. ಈಶ್ವರ – ತಾಮು / ಕೌಮಾರೀ
12. ಬಹುಧಾನ್ಯ – ವಿಷ್ಣು / ವೈಷ್ಣವೀ
13. ಪ್ರಮಾಥೀ – ಮಿತ್ರ / ವಾರಾಹೀ
14. ವಿಕ್ರಮ – ರುದ್ರ / ಮಾಹೇಂದ್ರೀ
15. ವೃಕ್ಷ – ಗೌರೀ / ಚಾಮುಂಡೀ
16. ಚಿತ್ರಭಾನು – ಲಕ್ಷ್ಮೀ / ಆರೋಗ್ಯ
17. ಸ್ವಭಾನು – ಷನ್ಮುಖ / ಭ್ರಾಜ
18. ಪಾರ್ಥಿವ – ಬೃಹಸ್ಪತಿ / ಪತಂಗ
19. ವ್ಯಯ – ನಿರ್ಋತಿ / ಸ್ವರ್ಣರ
20. ಸರ್ವಜಿತ್ – ತ್ವಷ್ಟ್ರು / ಜ್ಯೋತಿಷ್ಮಾನ್
21. ಸರ್ವಧಾರಿ – ಮರುತ್ / ವಿಭಾಸ
22. ವಿರೋಧೀ – ವಾಯು / ಕಶ್ಯಪ
23. ವಿಕೃತಿ – ಸಾವಿತ್ರೀ / ರವಿ
24. ಖರ – ಲಕ್ಷ್ಮೀ / ಸೂರ್ಯ
25. ನಂದನ – ಗೌರೀ / ಭಾನು
26. ವಿಜಯ – ಸರ್ಪ / ಖಗ
27. ಜಯ – ಕಾಲ / ಪೂಷಾ
28. ಮನ್ಮಥ – ಗಣಪತಿ / ಹಿರಣ್ಯಗರ್ಭ
29. ದುರ್ಮುಖ – ಉಶನಸ್ / ಮರೀಚಿ
30. ಹೇಮಲಂಬಿ – ಪಿತೃ / ಆದಿತ್ಯ
31. ವಿಲಂಬಿ – ಅದಿತಿ / ಸವಿತೃ
32. ವಿಕಾರೀ – ವಿರಿಂಚಿ / ಅರ್ಕ
33. ಶಾರ್ವರೀ – ನಿಶಾಕರ / ಅಗ್ನಿ
34. ಶುಭಕೃತ್ – ಪೂಷಾ / ಜಾತವೇದಸ್
35. ಶೋಭಕೃತ್ – ಪಿತೃ / ಸಹೋಜಸ್
36. ಕ್ರೋಧೀ – ಯಮ / ಜಾತವೇದಾಸ್
37. ಶೋಭಕೃತ್ – ಪಿತೃ / ಸಹೋಜಸ್
38. ಕ್ರೋಧೀ – ಯಮ / ಅಜಿರಾಪ್ರಭ
39. ವಿಶ್ವಾವಸು – ವಸು / ವೈಶ್ವಾನರ
40. ಪರಾಭವ–ವಿಶ್ವೇದೇವತೆಗಳು/ನರ್ಮಾಪಸ್
41. ಪ್ಲವಂಗ – ಶಶಾಂಕ / ಪಂಕ್ತಿರಾಧಸ್
42. ಕೀಲಕ – ಅಗ್ನಿ / ವಿಸರ್ಪಿ

43. ಸೌಮ್ಯ - ಭಾರ್ಗವ / ಮತ್ಸ್ಯ
44. ಸಾಧಾರಣ - ಮಹೇಶ್ವರ / ಕೂರ್ಮ
45. ವಿರೋಧಿಕೃತ್ - ಸರಸ್ವತೀ / ವರಾಹ
46. ಪರಿಧಾವೀ - ಲಕ್ಷ್ಮೀ / ನರಸಿಂಹ
47. ಪ್ರಮಾದೀ - ಸರಸ್ವತೀ / ವಾಮನ
48. ಆನಂದ - ಬ್ರಹ್ಮಾ / ರಾಮ
49. ರಾಕ್ಷಸ - ರವಿ / ಪರಶುರಾಮ
50. ನಳ - ಈಶ್ವರ / ಬಲರಾಮ
51. ಪಿಂಗಲ - ನಿರ್ಋತಿ / ಕೃಷ್ಣ
52. ಕಾಲಯುಕ್ತಿ - ರುದ್ರ / ಕಲ್ಕಿ
53. ಸಿದ್ಧಾರ್ಥಿ - ಷಣ್ಮುಖ / ಬುದ್ಧ
54. ರೌದ್ರಿ - ಅಗ್ನಿ / ದುರ್ಗಿ
55. ದುರ್ಮತಿ - ವಾಯು / ಯಾತುಧಾನ
56. ದುಂದುಭೀ - ಶಕ್ರ / ಭೈರವ
57. ರುಧಿರೋದ್ಧಾರೀ - ಫಣಿ / ಹನುಮಾನ್
58. ರಕ್ತಾಕ್ಷಿ - ಇಂದ್ರ / ಸರಸ್ವತೀ
59. ಕ್ರೋಧನ - ಸುಪರ್ಣ / ದಿಕ್ಷಾಯಣೀ
60. ಕ್ಷಯ - ವಾಯು / ಲಕ್ಷ್ಮೀ

## ಅಯನಗಳು - ಅಭಿಮಾನಿದೇವತೆಗಳು

1. ಉತ್ತರಾಯಣ - ಚಂದ್ರ
2. ದಕ್ಷಿಣಾಯನ - ಸೂರ್ಯ

## ಸೌರಮಾಸ - ಅಭಿಮಾನಿದೇವತೆಗಳು

1. ಮೇಷ - ಇಂದ್ರ
2. ವೃಷಭ - ವಾಯು
3. ಮಿಥುನ - ರಕ್ಷೋಹಾಗ್ನಿ
4. ಕರ್ಕಾಟಕ - ಸೂರ್ಯ
5. ಸಿಂಹ - ಅಗ್ನಿವಾಯುಸೂರ್ಯರು
6. ಕನ್ಯಾ - ಲಕ್ಷ್ಮೀ
7. ತುಲಾ - ಮಿತ್ರಾವರುಣರು
8. ವೃಶ್ಚಿಕ - ಸೂರ್ಯ
9. ಧನು - ಶ್ರೀ
10. ಮಕರ - ಅಲಕ್ಷ್ಮೀನಾಶನ
11. ಕುಂಭ - ಅಗ್ನಿಸೂರ್ಯನಿಲರು
12. ಮೀನ - ಅಗ್ನಿ

## ಪಕ್ಷದೇವತೆಗಳು

1. ಶುಕ್ಲಪಕ್ಷ - ಚಂದ್ರ
2. ಕೃಷ್ಣಪಕ್ಷ - ಸೂರ್ಯ

## ಅಭಿಮಾನಿದೇವತೆಗಳು

ಕಾಲಾಭಿಮಾನಿ ದೇವತೆ : ಅಬ್ದ ( ವರ್ಷ )ಕ್ಕೆ - ಅನಿರುದ್ಧ

ಅಯನ - ಪ್ರದ್ಯುಮ್ನ ( ಉತ್ತರ + ದಕ್ಷಣ )

ಋತು ( ಆರು ) - ಸಂಕರ್ಷಣ

ಮಾಸ ( 12 ) - ವಾಸುದೇವ ಪಕ್ಷ ( 24 ) - ಶ್ರೀ ಮನ್ನಾರಾಯಣ

# ಪಂಚಾಂಗ – – ಅಭಿಮಾನಿ ದೇವತೆಗಳು

**ತಿಥಿಗಳು–15**
ಪ್ರತಿಪತ್ – ಅಗ್ನಿ
ದ್ವಿತೀಯಾ – ಬ್ರಹ್ಮಾ
ತೃತೀಯಾ – ಗೌರೀ
ಚತುರ್ಥಿ – ಗಣಪತಿ
ಪಂಚಮಿ – ಸರ್ಪ
ಷಷ್ಠಿ – ಸ್ಕಂದ
ಸಪ್ತಮೀ – ಸೂರ್ಯ
ಅಷ್ಟಮೀ–ಸದ್ಯೋಜಾತ
ನವಮೀ – ದುರ್ಗಾ
ದಶಮೀ – ಶೇಷ
ಏಕಾದಶೀ – ಧರ್ಮ
ದ್ವಾದಶೀ – ಹರಿ
ತ್ರಯೋದಶೀ – ಕಾಮ
ಚತುರ್ದಶೀ – ಕಲಿ
ಹುಣ್ಣಿಮೆ – ಚಂದ್ರ
ಅಮಾವಾಸ್ಯೆ – ಪಿತೃಗಳು

**ಕರಣಗಳು–11**
ಭವ –ಸದ್ಯೋಜಾತ
ಬಾಲವ – ವಾಮದೇವ
ಕೌಲವ – ಅಘೋರ
ತೈತಿಲ – ತತ್ಪುರುಷ
ಗರ – ಈಶಾನ
ವಣಿಕ್ – ಶಿವ
ಭದ್ರಾ – ಈಶ್ವರ
ಶಕುನಿ – ವಿರೂಪಾಕ್ಷ
ಚತುಷ್ಪಾತ್–ನೀಲಕಂಠ
ನಾಗವಾನ್–ಉಮಾಪತಿ
ಕಿಂಸ್ತುಘ್ನ – ಶೂಲಿ

**ನಕ್ಷತ್ರಗಳು–27**
ಅಶ್ವಿನೀ – ಅಶ್ವಿನೀದೇ.
ಭರಣೀ – ಯಮ
ಕೃತ್ತಿಕಾ – ಅಗ್ನಿ
ರೋಹಿಣೀ – ಪ್ರಜಾಪತಿ
ಮೃಗಶಿರಾ – ಸೋಮ
ಆರ್ದ್ರಾ – ರುದ್ರ
ಪುನರ್ವಸು – ಅದಿತಿ
ಪುಷ್ಯ – ಬೃಹಸ್ಪತಿ
ಆಶ್ಲೇಷಾ – ಸರ್ಪ
ಮಘಾ – ಪಿತೃ
ಪೂರ್ವಾ – ಅರ್ಯಮಾ
ಉತ್ತರಾ – ಭಗ
ಹಸ್ತ – ಸವಿತಾ
ಚಿತ್ರಾ – ತ್ವಷ್ಟ್ರ
ಸ್ವಾತಿ – ವಾಯು
ವಿಶಾಖಾ – ಇಂದ್ರಾಗ್ನಿ
ಅನೂರಾಧ – ಮಿತ್ರ
ಜ್ಯೇಷ್ಠಾ – ಇಂದ್ರ
ಮೂಲ – ನಿರ್ಋತಿ
ಪೂರ್ವಾಷಾಢ – ಜಲದೇ.
ಉತ್ತರಾಷಾಢ – ವಿಶ್ವೇದೇ.
ಶ್ರವಣಾ – ವಿಷ್ಣು
ಧನಿಷ್ಠಾ – ವಸು
ಶತಭಿಷಾ – ವರುಣ
ಪೂರ್ವಾಭಾದ್ರ – ಅಜೈಕಪಾತ್
ಉತ್ತರಾಭಾದ್ರ–ಅಹಿರ್ಬುಧ್ನ್ಯ
ರೇವತೀ – ಪೂಷ

**ಯೋಗಗಳು–27**
ವಿಷ್ಕಂಭ – ವಿಶ್ವೇದೇ.
ಪ್ರೀತಿ – ಮರುತ್
ಆಯುಷ್ಮಾನ್ –ಹಿರಣ್ಯಗರ್ಭ
ಸೌಭಾಗ್ಯ – ದುರ್ಗಾ
ಶೋಭನ – ಪೃಥವೀ
ಅತಿಗಂಡ – ಅದಿತಿ
ಸುಕರ್ಮ – ಸೂರ್ಯ
ಧೃತಿ – ರಾಜ್ಞೀ
ಶೂಲ – ಇಂದ್ರ
ಗಂಡ – ಮರುತ್
ವೃದ್ಧಿ – ಮರುತ್
ಧ್ರುವ – ಪ್ರಾಜ್ಞೀ
ವ್ಯಾಘಾತ – ಅಗ್ನಿ
ಹರ್ಷಣ – ಹರಿ
ವಜ್ರ – ಇಂದ್ರ
ಸಿದ್ಧಿ – ಹಿರಣ್ಯ
ವ್ಯತೀಪಾತ – ವಿಶ್ವೇದೇ.
ವರೀಯಾನ್ – ವಾಯು
ಪರಿಘ – ಪವಮಾನಸೋಮ
ಶಿವ – ಪೃಥಿವೀ
ಸಿದ್ಧ – ಇಂದ್ರ
ಸಾಧ್ಯ – ವಿಶ್ವೇದೇ.
ಶುಭ – ಮರುತ್
ಶುಕ್ಲ – ಇಂದ್ರ
ಬ್ರಹ್ಮ – ಬ್ರಹ್ಮ
ಐಂದ್ರ – ಇಂದ್ರ
ವೈಧೃತೀ – ಅಗ್ನಿ

**ವಾರಗಳು–7** : ಭಾನುವಾರ – ಹರಿ ; ಸೋಮವಾರ – ದುರ್ಗಾ ; ಮಂಗಳವಾರ – ಬೃಹಸ್ಪತಿ ; ಬುಧವಾರ – ವಿಷ್ಣು ; ಗುರುವಾರ – ಬ್ರಹ್ಮ ; ಶುಕ್ರವಾರ–ಲಕ್ಷ್ಮೀ ; ಶನಿವಾರ – ಕುಬೇರ

## ದ್ವಾದಶಮಾಸ ಪಕ್ಷ ಋತುಗಳಲ್ಲಿಯ ಭಗವದ್ರೂಪಗಳು

| | ಮಾಸ ನಿಯಾಮಕ | ಶುಕ್ಲ ಪಕ್ಷ ಏಕಾದಶೀ | ಕೃಷ್ಣ ಪಕ್ಷ ಏಕಾದಶೀ | ಋತು | ನಿಯಾಮಕ |
|---|---|---|---|---|---|
| ಚೈತ್ರ | ಪದ್ಮೀ ವಿಷ್ಣು | ಕೇಶವ | ಪುರುಷೋತ್ತಮ | ವಸಂತ ಋತು | ವೇದವ್ಯಾಸರು |
| ವೈಶಾಖ | ಕಮಲಾ ಮಧುಸೂದನ | ನಾರಾಯಣ | ಅಧೋಕ್ಷಜ | | |
| ಜ್ಯೇಷ್ಠ | ರಮಾ ತ್ರಿವಿಕ್ರಮ | ಮಾಧವ | ನಾರಸಿಂಹ | ಗ್ರೀಷ್ಮ ಋತು | ಅನಿರುದ್ಧ |
| ಆಷಾಢ | ವೃಷಾಕಪಿ ವಾಮನ | ಗೋವಿಂದ | ಅಚ್ಯುತ | | |
| ಶ್ರಾವಣ | ಧನ್ಯಾಶ್ರೀಧರ | ವಿಷ್ಣು | ಜನಾರ್ದನ | ವರ್ಷ ಋತು | ಪ್ರದ್ಯುಮ್ನ |
| ಭಾದ್ರಪದ | ಮಂಗಳಾ ಹೃಷೀಕೇಶ | ಮಧುಸೂದನ | ಉಪೇಂದ್ರ | | |
| ಆಶ್ವಯುಜ | ಯಜ್ಞಾಪದ್ಮನಾಭ | ತ್ರಿವಿಕ್ರಮ | ಹರಿ | ಶರದ್ ಋತು | ಸಂಕರ್ಷಣ |
| ಕಾರ್ತೀಕ | ಇಂದಿರಾ ದಾಮೋದರ | ವಾಮನ | ದಾಮೋದರ | | |
| ಮಾರ್ಗಶಿರ | ಶ್ರೀ ಕೇಶವ | ಶ್ರೀಧರ | ಸಂಕರ್ಷಣ | ಹೇಮಂತ ಋತು | ವಾಸುದೇವ |
| ಪುಷ್ಯ | ಲಕ್ಷ್ಮೀನಾರಾಯಣ | ಹಹಿಕೇಶ | ವಾಸುದೇವ | | |
| ಮಾಘ | ಕಮಲಾಮಾಧವ | ಪದ್ಮನಾಭ | ಪ್ರದ್ಯುಮ್ನ | ಶಿಶಿರ ಋತು | ನಾರಾಯಣ |
| ಫಾಲ್ಗುಣ | ಪದ್ಮಾ ಗೋವಿಂದ | ದಾಮೋದರ | ಅನಿರುದ್ಧ | | |

# ಸಂವತ್ಸರಾದಿಗಳು

1. ಚಾಂದ್ರ ಸಂವತ್ಸರ    2. ಸೌರ ಸಂವತ್ಸರ    3. ಸಾವನ ಸಂವತ್ಸರ
4. ನಾಕ್ಷತ್ರ ಸಂವತ್ಸರ    5. ಬಾರ್ಹಸ್ಪತ್ಯ ಸಂವತ್ಸರ.

**ಚಾಂದ್ರ ಸಂವತ್ಸರ ಪಡೆಯುವ ವಿಧಾನ:**

ಗತಶಾಲಿವಾಹನ ಶಕೆಯ ಸಂಖ್ಯೆಗೆ (ಪಂಚಾಂಗದಲ್ಲಿರುವ) 78 ಕೂಡಿಸಿ, ಬರುವ ಮೊತ್ತವು ಕ್ರಿ.ಶ. ವರುಷ

ಉದಾ : 1933 ಶಾಲಿವಾಹನಶಕೆ + 78 = 2011

**ಯುಗಾದಿಗಳು:**

1. ತ್ರೇತಾಯುಗಾದಿ – ವೈಶಾಖ ಶುಕ್ಲ ತೃತೀಯಾ
2. ಕೃತಯುಗಾದಿ – ಕಾರ್ತೀಕ ಶುಕ್ಲ ನವಮೀ
3. ದ್ವಾಪರ ಯುಗಾದಿ – ಮಾಘ ಶುಕ್ಲ ಪೌರ್ಣಮಾ
4. ಕಲಿಯುಗಾದಿ – ಭಾದ್ರಪದ ಕೃಷ್ಣ ತ್ರಯೋದಶೀ

**ಮನ್ವಾದಿಗಳು**

1. ಚೈತ್ರಶುದ್ಧ ಚತುರ್ಥಿ
2. ಚೈತ್ರಶುದ್ಧ ಪೌರ್ಣಮಾ
3. ಜ್ಯೇಷ್ಠಶುದ್ಧ ಪೌರ್ಣಮಾ
4. ಆಷಾಡ ಶುದ್ಧ ದಶಮೀ
5. ಆಷಾಡ ಶುದ್ಧ ಪೌರ್ಣಮಾ
6. ಆಷಾಡಕೃಷ್ಣ ಅಷ್ಟಮೀ
7. ಶ್ರಾವಣ ಕೃಷ್ಣ ಅಷ್ಟಮೀ
8. ಭಾದ್ರಪದ ಶುದ್ಧ ತೃತೀಯಾ
9. ಆಶ್ವೀಜ ಶುದ್ಧ ನವಮೀ
10. ಕಾರ್ತೀಕ ಶುದ್ಧ ದ್ವಾದಶೀ
11. ಕಾರ್ತೀಕ ಶುದ್ಧ ಪೌರ್ಣಮಾ
12. ಮಾಘ ಶುದ್ಧ ಸಪ್ತಮೀ
13. ಫಾಲ್ಗುಣ ಶುದ್ಧ ಪೌರ್ಣಮಾ
14. ಫಾಲ್ಗುಣ ಕೃಷ್ಣ ಅಮಾವಾಸ್ಯೆ

**ಕಲ್ಪಾದಿಗಳು**

1. ಶ್ವೇತವರಾಹ ಕಲ್ಪಾದಿ – ಚೈತ್ರ ಶುಕ್ಲ ಪ್ರತಿಪತ್
2. ಕೂರ್ಮ ಕಲ್ಪಾದಿ – ಚೈತ್ರಶುದ್ಧ ಪಂಚಮೀ
3. ವೈಶಾಖ ಶುಕ್ಲ ತೃತೀಯಾ
4. ಕಾರ್ತೀಕ ಶುಕ್ಲ ಸಪ್ತಮೀ
5. ಮಾರ್ಗಶಿರ ಶುಕ್ಲ ನವಮೀ
6. ಮಾಘ ಶುಕ್ಲ ತ್ರಯೋದಶೀ
7. ಫಾಲ್ಗುಣ ಕೃಷ್ಣ ತೃತೀಯಾ

# ಗೃಹವಾಸ್ತು ನಕ್ಷೆ

ಶ್ರೀ ಪುರಂದರದಾಸರು 'ನಮ್ಮ ಮನೆ ಅಲ್ಲಿದೆ, ಇಲ್ಲಿಗೆ ಬಂದೆವು ಸುಮ್ಮನೆ' ಎಂದಂತೆ ತಾತ್ವಿಕವಾಗಿ ಸದಾ ಭಗವಂತನ ಸನಿಹದಲ್ಲಿರುವ ಚಿಂತನೆ ನಮ್ಮದಾಗಬೇಕು. ಆದರೆ ಭಗವಂತ ನಮ್ಮ ಸಾಧನೆಗಳನ್ನು ಪೂರ್ಣಗೊಳಿಸಲು ಸಂಸಾರ ಸಾಗರದಲ್ಲಿ ಮುಳುಗಿಸಿರುವ. 'ಇರಬೇಕು ಇರದಿರಬೇಕು' ಆದ್ದರಿಂದ ಇರಲು ಒಂದು ನೆಲೆ ಎಷ್ಟು ಮುಖ್ಯವೋ, ಅಷ್ಟೆ ಮುಖ್ಯ ಹೇಗಿರಬೇಕೆಂಬುದು. ಭಗವಂತನ ದಿವ್ಯ ಪ್ರತಿಮೆಗೆ ಅಲಂಕರಿಸಿ ಕಂಡು ಹೇಗೆ ಸಂತಸ ಭರಿತ ರಾಗುವೆವೋ ಹಾಗೆಯೇ ಭಗವಂತ ನೆಲೆಸಿರುವ (ಈಶಾವಾಸ್ಯ) ಮನೆ (ಮಂದಿರ) ಯನ್ನು ನಿರ್ಮಿಸಿ, ಅವನಿಗರ್ಪಿಸಿ, ಅವನನ್ನು ನೆನೆಯುತ್ತ ನೆಲೆಸಿರುವುದೆ ವಾಸ್ತುವಾಗಿದೆ. ಭಗವಂತನದ್ದೇ ಮನೆಯಾದ ನಮ್ಮ ನೆಲೆಯನ್ನು ಶಾಸ್ತ್ರೋಕ್ತವಾಗಿ ಅಂದರೆ ಜ್ಞಾನಿಗಳು ತಿಳಿಸಿದಂತೆ ವಾಸ್ತು ಶಾಸ್ತ್ರ ವಿಧಿಸಿದಂತೆ ನಿರ್ಮಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈ ಹಿನ್ನೆಲೆಯಲ್ಲಿ ಸ್ಥೂಲವಾಗಿ ತಕ್ಕಮಟ್ಟಿಗೆ ಗೃಹವಾಸ್ತು ನಕ್ಷೆಯನ್ನು ಕೊಡಲಾಗಿದೆ.

ವಾಯುವ್ಯ(ಪ್ರವಹವಾಯು) ಉತ್ತರ (ಸೋಮ/ಕುಬೇರ) ಈಶಾನ್ಯ (ಈಶಾನ)




ನೈಋತ್ಯ (ನಿರ್ಋತಿ) ದಕ್ಷಿಣ (ಯಮ) ಆಗ್ನೇಯ (ಅಗ್ನಿ)

# ನಕ್ಷತ್ರಗಳ ವೈಭವ

| ನಕ್ಷತ್ರ | ಗಣ | ಅಧಿಪತಿ | ವರ್ಣ | ಅಮೃತಯೋಗ (ವಾರ) | ದಶಾನಾಥ | ರಾಶಿ | ಶುಭಾಶುಭ | 1ನೇ ಪಾದ | 2ನೇ ಪಾದ | 3ನೇ ಪಾದ | 4ನೇ ಪಾದ |
|---|---|---|---|---|---|---|---|---|---|---|---|
| ಅಶ್ವಿನಿ | ದೇವ | ಅಶ್ವಿನಿದೇ | ಬ್ರಾಹ್ಮಣ | ಗು, ಶು | ಕೇತು | ಮೇಷ | ಶುಭ | ಚು | ಚೆ | ಚೊ | ಲ |
| ಭರಣಿ | ಮನುಷ್ಯ | ಯಮ | ಕ್ಷತ್ರಿಯ | ಗುರು | ಶುಕ್ರ | ಮೇಷ | ಅಶುಭ | ಲಿ | ಲು | ಲೆ | ಲೊ |
| ಕೃತ್ತಿಕಾ | ರಾಕ್ಷಸ | ಅಗ್ನಿ | ವೈಶ್ಯ | ಶನಿ | ಸೂರ್ಯ | ಮೇ/ವೃ | ಅಶುಭ | ಅ | ಇ | ಉ | ಎ |
| ರೋಹಿಣಿ | ಮನುಷ್ಯ | ಬ್ರಹ್ಮ | ಶೂದ್ರ | ಸೋ. ಮಂ. | ಚಂದ್ರ | ವೃಷಭ | ಶುಭ | ಒ | ವ | ವಿ | ವು |
| ಮೃಗಶಿರಾ | ದೇವ | ಚಂದ್ರ | ಪಂಚಮ | ಮಂ. | ಕುಜ | ವೃ/ಮಿ | ಶುಭ | ವೆ | ವೊ | ಕ | ಕಿ |
| ಆರ್ದ್ರಾ | ಮನುಷ್ಯ | ರುದ್ರ | ಸಂಕರ | – | ರಾಹು | ಮಿಥುನ | ಅಶುಭ | ಕು | ಘ | ಙ | ಛ |
| ಪುನರ್ವಸು | ದೇವ | ಅದಿತಿ | ಬ್ರಾಹ್ಮಣ | ಮಂ., ಗು | ಗುರು | ಮಿ/ಕರ್ಕ | ಶುಭ | ಕೆ | ಕೊ | ಹ | ಹಿ |
| ಪುಷ್ಯ | ದೇವ | ಬೃಹಸ್ಪತಿ | ಕ್ಷತ್ರಿಯ | ಗುರು | ಶನಿ | ಕರ್ಕ | ಶುಭ | ಹು | ಹೆ | ಹೊ | ಡ |
| ಆಶ್ಲೇಷ | ರಾಕ್ಷಸ | ಸರ್ಪ | ವೈಶ್ಯ | – | ಬುಧ | ಕರ್ಕ | ಅಶುಭ | ಡಿ | ಡು | ಡೆ | ಡೊ |
| ಮಖಾ | ರಾಕ್ಷಸ | ಪಿತೃಗಳು | ಶೂದ್ರ | ಗು, ಶ | ಕೇತು | ಸಿಂಹ | ಶುಭಾಶುಭ | ಮ | ಮಿ | ಮು | ಮೆ |
| ಪುಬ್ಬ | ಮನುಷ್ಯ | ಭಗ | ಪಂಚಮ | ಬು | ಶುಕ್ರ | ಸಿಂಹ | ಶುಭ | ಮೊ | ಟ | ಟಿ | ಟು |
| ಉತ್ತರಾ | ಮನುಷ್ಯ | ಅರ್ಯಮ | ಸಂಕರ | ಭಾ, ಮಂ, ಬು | ಸೂರ್ಯ | ಸಿಂ/ಕರ್ಕ | ಶುಭ | ಟೆ | ಟೊ | ಪ | ಪಿ |

| | | | | | | | | | | | |
|---|---|---|---|---|---|---|---|---|---|---|---|
| ಹಸ್ತ | ದೇವ | ಸೂರ್ಯ | ಬ್ರಾಹ್ಮಣ | ಶುಕ್ರ | ಚಂದ್ರ | ಕನ್ಯಾ | ಶುಭ | ಪು | ಷ | ಣ | ಠ |
| ಚಿತ್ತ | ರಾಕ್ಷಸ | ತ್ವಷ್ಟ್ರು | ಕ್ಷತ್ರಿಯ | - | ಕುಜ | ಕರ್ಕ/ತುಲಾ | ಶುಭ | ಪೆ | ಪೊ | ರ | ರಿ |
| ಸ್ವಾತಿ | ದೇವ | ವಾಯು | ವೈಶ್ಯ | ಸೋ, ಗು, ಶ | ರಾಹು | ತುಲಾ | ಶುಭ | ರು | ರೆ | ರೊ | ತ |
| ವಿಶಾಖ | ರಾಕ್ಷಸ | ಇಂದ್ರ | ಶೂದ್ರ | - | ಗುರು | ತುಲಾ/ವೃಶ್ಚಿಕ | ಶುಭಾಶುಭ | ತಿ | ತು | ತೆ | ತೊ |
| ಅನುರಾಧ | ದೇವ | ಮಿತ್ರ | ಪಂಚಮ | ಬು | ಶನಿ | ವೃಶ್ಚಿಕ | ಶುಭ | ನ | ನಿ | ನು | ನೆ |
| ಜ್ಯೇಷ್ಠಾ | ರಾಕ್ಷಸ | ಇಂದ್ರ | ಸಂಕರ | - | ಬುಧ | ವೃಶ್ಚಿಕ | ಅಶುಭ | ನೊ | ಯ | ಯಿ | ಯು |
| ಮೂಲ | ರಾಕ್ಷಸ | ನಿಋತಿ | ಬ್ರಾಹ್ಮಣ | ಭಾ, ಮಂ, ಶು | ಕೇತು | ಧನುಸ್ಸು | ಶುಭಾಶುಭ | ಯೆ | ಯೊ | ಬ | ಬಿ |
| ಪೂರ್ವಾಷಾಢ | ಮನುಷ್ಯ | ಬುಧ | ಕ್ಷತ್ರಿಯ | ಬು | ಶುಕ್ರ | ಧನುಸ್ಸು | ಅಶುಭ | ಬು | ಧ | ಭ | ಢ |
| ಉತ್ತರಾಷಾಢ | ಮನುಷ್ಯ | ವಿಶ್ವೇದೇ | ವೈಶ್ಯ | ಬು | ಸೂರ್ಯ | ಧ/ಮ | ಶುಭ | ಬೆ | ಬೊ | ಜ | ಜಿ |
| ಶ್ರವಣ | ದೇವ | ವಿಷ್ಣು | ಶೂದ್ರ | ಭಾ, ಸೋ, | ಚಂದ್ರ | ಮಕರ | ಶುಭ | ಶಿ | ಶು | ಶೆ | ಶೊ |
| ಧನಿಷ್ಠಾ | ರಾಕ್ಷಸ | ವಸು | ಪಂಚಮ | - | ಕುಜ | ಮ/ಕುಂ | ಶುಭ | ಗ | ಗಿ | ಗು | ಗೆ |
| ಶತಭಿಷ | ರಾಕ್ಷಸ | ವರುಣ | ಸಂಕರ | ಶ | ರಾಹು | ಕುಂಭ | ಶುಭ | ಗೊ | ಸ | ಸಿ | ಸು |
| ಪೂರ್ವಾಭಾದ್ರ | ಮನುಷ್ಯ | ಅಜೈಕಪಾತ್ | ಬ್ರಾಹ್ಮಣ | ಬು | ಗುರು | ಕುಂ/ಮೀ | ಅಶುಭ | ಸೆ | ಸೊ | ದ | ದಿ |
| ಉತ್ತರಾಭಾದ್ರ | ಮನುಷ್ಯ | ಅಹಿರ್ಬುಧ್ನಿ | ಕ್ಷತ್ರಿಯ | ಭಾ, ಮಂ, ಶು | ಶನಿ | ಮೀನ | ಶುಭ | ದು | ಖ | ಝ | ಧ |
| ರೇವತಿ | ದೇವ | ಪೂಷಾ | ವೈಶ್ಯ | ಭಾ, ಶು | ಬುಧ | ಮೀನ | ಶುಭ | ದೆ | ದೊ | ಚ | ಚಿ |

# ನವಗ್ರಹಗಳ ಉಪಯುಕ್ತ ವಿವರ - 1

| ನವಗ್ರಹಗಳು | ಗೋತ್ರ | ಅಧಿಪತಿ ಸ್ಥಾನ | ಜನಿಸಿದ ದೇಶ | ರಾಶಿ ವಾಸ | ಮಂಡಲದಲ್ಲಿ ಸ್ಥಾನ | ದಿಶಾ ಸ್ಥಾನ | ವರ್ಣ | ವಾಹನ | ಸ್ವಭಾವ | ಮಂಡಲ ಆಕಾರ | ಉಚ್ಛ ಕ್ಷೇತ್ರ | ನೀಚ ಕ್ಷೇತ್ರ |
|---|---|---|---|---|---|---|---|---|---|---|---|---|
| ಸೂರ್ಯ | ಕಶ್ಯಪ | ಸಿಂಹ | ಕಳಿಂಗ | 1 ತಿಂ. | ಕೇಂದ್ರ | ಪೂರ್ವ | ಕ್ಷತ್ರಿಯ | ಸಪ್ತಾಶ್ವ ರಥ | ಕ್ರೂರ | ಗುಂಡು | ಮೇಷ | ತುಲಾ |
| ಚಂದ್ರ | ಆತ್ರೇಯಸ | ಕರ್ಕಾಟಕ | ಕ್ಷೀರಸಾಗರ | 2.5 ದಿನ | ಆಗ್ನೇಯ | ವಾಯವ್ಯ | ವೈಶ್ಯ | ದಶಾಶ್ವ ರಥ | ಸೌಮ್ಯ | ಚೌಕ | ವೃಷಭ | ವೃಶ್ಚಿಕ |
| ಮಂಗಳ | ಭಾರದ್ವಾಜ | ಮೇಷ/ ವೃಶ್ಚಿಕ | ವಿಂಧ್ಯ | 1.5 ತಿಂ. | ದಕ್ಷಿಣ | ದಕ್ಷಿಣ | ಕ್ಷತ್ರಿಯ | ಟಗರು | ಕ್ರೂರ | ತ್ರಿಕೋನ | ಮಕರ | ಕರ್ಕ |
| ಬುಧ | ಆತ್ರೇಯಸ | ಕನ್ಯಾ/ ಮಿಥುನ | ಮಗಧ | 18 ದಿನ | ಈಶಾನ್ಯ | ಉತ್ತರ | ವೈಶ್ಯ | ಸಿಂಹ | ಸೌಮ್ಯ | ಬಾಣಾಕಾರ | ಕನ್ಯಾ | ಮೀನ |
| ಗುರು | ಆಂಗೀರಸ | ಧನಸ್ಸು/ ಮೀನ | ಸೈಂಧವ | 1 ವರ್ಷ | ಉತ್ತರ | ಈಶಾನ್ಯ | ಬ್ರಾಹ್ಮಣ | ಆನೆ | ಸೌಮ್ಯ | ಆಯತಾಕಾರ | ಕರ್ಕ | ಮಕರ |
| ಶುಕ್ರ | ಭಾರ್ಗವ | ತುಲಾ/ ವೃಶ್ಚಿಕ | ಪಾಂಚಾಲ | 28 ದಿನ | ಪೂರ್ವ | ಆಗ್ನೇಯ | ಬ್ರಾಹ್ಮಣ | ಸಿಂಹ | ಸೌಮ್ಯ | ಪಂಚಕೋಣ | ಮೀನ | ಕನ್ಯಾ |
| ಶನಿ | ಕಾಶ್ಯಪ | ಮಕರ/ ಕುಂಭ | ಸೌರಾಷ್ಟ್ರ | 2.5ವರ್ಷ | ಪಶ್ಚಿಮ | ಪಶ್ಚಿಮ | ಶೂದ್ರ | ಕಾಗೆ | ಕ್ರೂರ | ಧನಸ್ಸಿನ ಆಕಾರ | ತುಲಾ | ಮೇಷ |
| ರಾಹು | ಪೈಠೀನಸ | - | ಸಿಂಹಳ | 1.5ವರ್ಷ | ನೈಋತ್ಯ | ನೈಋತ್ಯ | - | ಮರಿಸಿಂಹ | ಕ್ರೂರ | ಮೊರದ ಆಕಾರ | ಮಿಥುನ | ಧನು |
| ಕೇತು | ಜೈಮಿನಿ | - | ಬರ್ಮಾ | 1.5ವರ್ಷ | ವಾಯುವ್ಯ | ನೈಋತ್ಯ | - | ದರ್ಭೆ | ಕ್ರೂರ | ಬಾವುಟದ ಆಕಾರ | ಧನು | ಮಿಥುನ |

# ನವಗ್ರಹಗಳ ಉಪಯುಕ್ತ ವಿವರ - 2

| ನವಗ್ರಹ ಗಳು | ತ್ರಿಕೋಣ ಸ್ಥಾನ | ಲಿಂಗ/ ಕಾರಕ | ದಿನ ಬಲ ಪ್ರಾಬಲ್ಯ | ದಶಾ ಪ್ರಮಾಣ | ಮಿತ್ರ ಗ್ರಹ | ಶತ್ರು ಗ್ರಹ | ಸಮ ಗ್ರಹ | ಧಾನ್ಯ | ನವರತ್ನ | ಲೋಹ | ರಸ | ವಸ್ತ್ರ |
|---|---|---|---|---|---|---|---|---|---|---|---|---|
| ಸೂರ್ಯ | ಸಿಂಹ | ಪುಂ/ಪಿತೃ | ಮಧ್ಯಾಹ್ನ | 6ವರ್ಷ | ಚಂ.ಮಂ. ಗು. | ಶ.ಶು. ರಾ. | ಬುಧ | ಗೋಧಿ | ಮಾಣಿಕ್ಯ | ಚಿನ್ನ ತಾಮ್ರ | ಬೆಲ್ಲ | ಕುಸುಂಬ |
| ಚಂದ್ರ | ವೃಷಭ | ಸ್ತ್ರೀ/ಮಾತೃ | ಅಪರಾಹ್ಣ | 10ವರ್ಷ | ಸೂ.ಬು. ಗು.ರಾ | ರಾಹು | ಮಂ. ಶು. | ಅಕ್ಕಿ | ಮುತ್ತು | ಬೆಳ್ಳಿ | ತುಪ್ಪ | ಬಿಳಿ |
| ಮಂಗಳ | ಮೇಷ | ಪುಂ/ಭ್ರಾತೃ | ಮಧ್ಯಾಹ್ನ | 7ವರ್ಷ | ಗು.ಚಂ. ಸೂ. | ಬು.ರಾ. | ಶು.ಶ | ತೊ.ಬೇಳೆ | ಹವಳ | ಕಬ್ಬಿಣ | ಬೆಲ್ಲ | ಕೆಂಪು |
| ಬುಧ | ಕನ್ಯಾ | ನಪುಂ/ಪ್ರಜ್ಞಾ | ಪ್ರಾತಃ | 17ವರ್ಷ | ಸೂ.ಶು ರಾ. | ಚಂದ್ರ | ಮಂ. ಗು ಶನಿ | ಹೆ.ಕಾಳು | ಪಚ್ಚೆ | ಪಾದರಸ | ತುಪ್ಪ | ನೀಲಿ |
| ಗುರು | ಧನಸ್ಸು | ಪುಂ/ಪುತ್ರ | ಪ್ರಾತಃ | 16ವರ್ಷ | ಸೂ.ಚಂ. ಮಂ. | ಬು. ಶು. | ಶನಿ. ರಾ. | ಕಡಲೆ ಕಾಳು | ಪುಷ್ಯರಾಗ | ತವರ | ಸಕ್ಕರೆ | ಹಳದಿ |
| ಶುಕ್ರ | ತುಲಾ | ಸ್ತ್ರೀ/ಕಳತ್ರ | ಪರಾಹ್ಣ | 20ವರ್ಷ | ಬು. ಶ ರಾ | ಸೂ. ಚಂ. | ಮಂಗಳ ಗುರು | ಅವರೆ ಕಾಳು | ವಜ್ರ | ಸೀಸ ಕಬ್ಬಿಣ | ತುಪ್ಪ | ಚಿತ್ರ ವಸ್ತ್ರ |
| ಶನಿ | ಕುಂಭ | ನಪುಂ/ ಆಯುಷ್ಯ | ಸಾಯಂ | 19ವರ್ಷ | ಶು.ಬು. ರಾ. | ಸೂ.ಚಂ. ಮಂ. | ಗುರು | ಕರೀ ಎಳ್ಳು | ನೀಲ ಮಣಿ | ಕಬ್ಬಿಣ | ತೈಲ | ಕಪ್ಪು |
| ರಾಹು | – | ಪುಂ/ಮಾ ತಾಮಹ | ಸಾಯಂ | 12ವರ್ಷ | ಬು.ಶ. ಶು. | ಸೂ.ಚಂ. ಮಂ. | ಗುರು | ಉದ್ದಿನ ಕಾಳು | ಗೋಮೇ ಧಿಕ | ಸೀಸ | ತೈಲ | ನೀಲ |
| ಕೇತು | – | ಪುಂ/ಪಿತಾ ಮಹ | ಸಾಯಂ | 7ವರ್ಷ | ಬು.ಶ. ರಾ | ಸೂ.ಚಂ. ಮಂ. | ಗುರು | ಹುರುಳೀ ಕಾಳು | ವೈಢೂರ್ಯ | ಕಬ್ಬಿಣ | ತೈಲ | ಕಪ್ಪು |

## ನವಗ್ರಹಗಳ ಉಪಯುಕ್ತ ವಿವರ - 3

| ನವಗ್ರಹಗಳು | ಅಧಿದೇವತೆ | ಪ್ರತ್ಯಧಿದೇವತೆ | ಪುಷ್ಪ | ಧಾತು ಉಪಧಾತು | ಇರುವ ಬಣ್ಣ | ನಿಯಂತ್ರಿತ ವಿಭಾಗ | ವೃಕ್ಷ | ಪ್ರಾಣಿ | ಅಧಿಪ್ರತ್ಯಧಿ ದೇವತೆ | ಜಪ ಸಂಖ್ಯೆ |
|---|---|---|---|---|---|---|---|---|---|---|
| ಸೂರ್ಯ | ರುದ್ರ | ಅಗ್ನಿ | ಕೆಂಪು ಹೂ | ಸುವರ್ಣ ತಾಮ್ರ | ದಾಸವಾಳದ ಕೆಂಪು | ಮೂಳೆಗಳು | ಎಕ್ಕೆ ಗಿಡ | ಕೆಂಪು ಧೇನು | ಅಗ್ನಿ ಈಶ್ವರ | 7,000 |
| ಚಂದ್ರ | ಗೌರೀ | ಅಪ್ | ಬಿಳಿ ಹೂ | ಸುವರ್ಣ ಬೆಳ್ಳಿ | ಶುದ್ಧಬಿಳಿ | ರಕ್ತ | ಮುತ್ತುಗ | ಬಿಳಿ ಎತ್ತು | ಆಪಃ ಪಾರ್ವತೀ | 11,000 |
| ಮಂಗಳ | ಸ್ಕಂದ | ಪೃಥ್ವೀ | ಕೆಂಪು ಕಮಲ | ಸುವರ್ಣ ತಾಮ್ರ | ಮಿಂಚಿನ ಪ್ರ.ದೇಹ | ಎಲುಬು | ಕಗ್ಗಲೀ ಗಿಡ | ಕೆಂಪು ಎತ್ತು | ಭೂಮಿ ಸ್ಕಂಧ | 10,000 |
| ಬುಧ | ನಾರಾಯಣ | ವಿಷ್ಣು | ಸರ್ವ ಪುಷ್ಪ | ಸುವರ್ಣ ಕಂಚು | ಶ್ಯಾಮಲ ವರ್ಣ | ಚರ್ಮ | ಉತ್ತರಣೀ | ಗಜ | ವಿಷ್ಣು ನಾರಾಯಣ | 4,000 |
| ಗುರು | ಬ್ರಹ್ಮ | ಇಂದ್ರ | ಹಳದಿ ಹೂ | ಸುವರ್ಣ ಕಂಚು | ಬಂಗಾರದ ದೇಹ | ಮೇಧಸ್ಸು | ಅಶ್ವತ್ಥ | ಕುದುರೆ | ಇಂದ್ರ ಬ್ರಹ್ಮ | 19,000 |
| ಶುಕ್ರ | ಇಂದ್ರ | ಇಂದ್ರಾಣಿ | ಬಿಳಿ ಹೂ | ಸುವರ್ಣ ಬೆಳ್ಳಿ | ಶುಕ್ಲ ವರ್ಣ | ವೀರ್ಯ | ಅತ್ತೀ ಮರ | ಬಿಳಿ ಕುದುರೆ | ಇಂದ್ರಾಣಿ ಇಂದ್ರ | 16,000 |
| ಶನಿ | ಯಮ | ಪ್ರಜಾಪತಿ | ಕಪ್ಪು ಹೂ | ಸುವರ್ಣ ಕಬ್ಬಿಣ | ಕಾಡಿಗೆ ಕಪ್ಪುವರ್ಣ | ನರಗಳು | ಬನ್ನೀ ಮರ | ಎಮ್ಮೆ | ಪ್ರಜಾಪತಿ ಯಮ | 23,000 |
| ರಾಹು | ಕಾಲ | ಸರ್ಪ | ಕಪ್ಪು ಹೂ | ಸುವರ್ಣ ಸೀಸ | ಅರ್ಧ ಸರ್ಪಾಕಾರ | - | ಗರಿಕೆ ಹುಲ್ಲು | ಅಶ್ವ | ಸರ್ಪ ಕಾಲ | 18,000 |
| ಕೇತು | ಚಿತ್ರಗುಪ್ತ | ಬ್ರಹ್ಮ | ಧೂಮ್ರ ಹೂ | ಸುವರ್ಣ ಉಕ್ಕು | ಹಳದಿಮಿಶ್ರ ಕೆಂಪು | - | ದರ್ಭೆ | ಹೋತು | ಬ್ರಹ್ಮ ಚಿತ್ರಗುಪ್ತ | 17,000 |

# ಪ್ರಾಚೀನ ಗಣನಾಕ್ರಮ

ಏಕ = 1, ದಶ = 10, ಶತ = 100, ಸಹಸ್ರ = 1000

ಲಕ್ಷ = 1,00,000, ಕೋಟಿ = 1,00,00,000 ಶತಕೋಟಿ = 100,00,00,000

ಅರ್ಬುದ = 1,000,00,00,000 ನ್ಯರ್ಬುದ = 10,000,00,00,000

ಖರ್ವ = 100,000,00,00,000 ಮಹಾಖರ್ವ = 1,000,000,00,00,000

ಪದ್ಮ = 10,000,000,00,00,000 ಮಹಾಪದ್ಮ = 100,000,000,00,00,000

ಕ್ಷೋಣಿ = 1,000,000,000,00,00,000

ಮಹಾಕ್ಷೋಣಿ = 10,000,000,000,00,00,000

ಶಂಖ = 100,000,000,000,00,00,000

ಮಹಾಶಂಖ = 1,000,000,000,000,00,00,000

ದೀಪ್ತಿ = 10,000,000,000,000,00,00,000

ಅನಂತ (ಇದರ ಬಗ್ಗೆ ಇನ್ನೂ ವಿಮರ್ಶೆ ಅಗತ್ಯವಿದೆ) = 1 ರ ಮುಂದೆ 144 ಸೊನ್ನೆಗಳು

## ಪ್ರಾಚೀನ ಕಾಲಗಣನೆ

| | | |
|---|---|---|
| ೧ ಪರಮಅಣು | = | ೦.೦೦೧೧ ಸೆಂ |
| ೨ ಪರಮಾಣು = ೧ ಅಣು | = | ೦.೦೦೨೨ ಸೆಂ. |
| ೯ ಅಣು = ೧ ತ್ರುಟಿ | = | ೦.೦೧೯೮ ಸೆಂ. |
| ೯ ತ್ರುಟಿ = ೧ ಲವ | = | ೦.೧೭೭೮ ಸೆಂ. |
| ೩ ಲವ = ೧ ನಿಮೇಷ | = | ೦.೫೩೩೩ ಸೆಂ. |
| ೩ ನಿಮೇಷ = ೧ ಕ್ಷಣ | = | ೧.೬೦೦೦ ಸೆಂ. |
| ೫ ಕ್ಷಣ = ೧ ಕಾಷ್ಟ | = | ೮ ಸೆಂ. |
| ೮ ನಿಮೇಷ | = | ೧ ಮಾತ್ರಾ |
| ೨೦ ಮಾತ್ರಾ | = | ೧ ಪ್ರಾಣ |
| ೬ ಪ್ರಾಣ | = | ೧ ಪಳ |
| ೧ ಪಳ = ೫೦ ವಿಪಳ | = | ೨೪ ಸೆಂ. |
| ೬೦ ಪಳ | = | ೧ ಘಳಿಗೆ (೨೪ ಮಿನಿಟ್) |
| ೨.೫ ಘಳಿಗೆ | = | ೧ ಗಂಟೆ (೬೦ ಮಿನಿಟ್) |
| ೨೪ ಘಂಟೆ | = | ೬೦ ಘಳಿಗೆ = ೧ ದಿನ |
| ೧೫ ಉಸಿರು X ೬೦ ನಿಮಿಷ X ೨೪ ಗಂ. | = | ೨೧೦೦೦(ಒಂದು ದಿನದ ಉಸಿರಾಟ) |

# ಕಾಲದ ಪರಿಮಾಣ ವೈಭವ

| | | | | | |
|---|---|---|---|---|---|
| 5 ಕ್ಷಣ | = | 1 ತ್ರುಟಿಕಾಲ | 50 ತ್ರುಟಿ | = | 1 ಲವಕಾಲ |
| 2 ಲವ | = | 1 ನಿಮಿಷ (ರೆಪ್ಪೆ ಹೊಡೆದಷ್ಟು ಕಾಲ) | | | |
| 8 ನಿಮಿಷ | = | 1 ಮಾತ್ರ | 2 ಮಾತ್ರ | = | 1 ಗುರು |
| 10 ಗುರು | = | 1 ಪ್ರಾಣ | 6 ಪ್ರಾಣ | = | 1 ಪಳ |
| 12 ಪಳ | = | 1 ಬಾಣ | 5 ಬಾಣ | = | 1 ಘಟಿಕಾ |
| 30 ಘಟಿಕಾ | = | 1 ಹಗಲು (12 ಗಂಟೆ) | 60 ಘಟಿಕಾ | = | 1 ದಿನ (24 ಗಂಟೆ) |
| 7 ದಿನ | = | 1 ವಾರ | 4 ವಾರ | = | 1 ತಿಂಗಳು (ಸುಮಾರು) |
| 15 ದಿನ | = | 1 ಪಕ್ಷ | 2 ಪಕ್ಷ | = | 1 ಮಾಸ (ತಿಂಗಳು) |
| 2 ಮಾಸ | = | 1 ಋತು | 3 ಋತು | = | 1 ಅಯನ |
| 2 ಅಯನ | = | 1 ವರ್ಷ (360 ದಿನ) | 12 ಮಾಸ | = | 1 ವರ್ಷ |

(ಮನುಷ್ಯನ ಒಂದು ದಿನದ ಉಸಿರಾಟ = 15×60×24 = 21,600)

ಮನುಷ್ಯರ 30 ದಿನ = ಪಿತೃಗಳ ಒಂದು ದಿನ

ಮನುಷ್ಯರ 360 ದಿನ = ದೇವತೆಗಳ ಒಂದು ದಿನ

ಮನುಷ್ಯರ 360 ವರ್ಷ = ದೇವತೆಗಳ ಒಂದು ವರ್ಷ

ಕೃತಯುಗ = ಮನುಷ್ಯರ 1728000 ವರ್ಷ (ದೇವಮಾನದಂತೆ 4800 ವರ್ಷ)

ತ್ರೇತಾಯುಗ = ಮನುಷ್ಯರ 1296000 ವರ್ಷ (ದೇವಮಾನದ 3600 ವರ್ಷ)

ದ್ವಾಪರಯುಗ = ಮನುಷ್ಯರ 864000 ವರ್ಷ (ದೇವಮಾನದ 2400 ವರ್ಷ)

ಕಲಿಯುಗ = ಮನುಷ್ಯರ 432000 ವರ್ಷ (ದೇವಮಾನದ 1200 ವರ್ಷ)

4 ಯುಗಗಳು = 1 ಮಹಾಯುಗ = 4320000 ವರ್ಷ (ಮನುಷ್ಯಮಾನದಂತೆ)

1000 ಮಹಾಯುಗಗಳು = ಬ್ರಹ್ಮನ 1 ದಿನ = 43,20,000,000 (ಮನುಷ್ಯಮಾನ)

ಚತುರ್ಮುಖಬ್ರಹ್ಮರ ಒಂದು ಕಲ್ಪ (1 ದಿನ)ದಲ್ಲಿ 14 ಮನುಗಳು, 14 ಇಂದ್ರರು ರಾಜ್ಯಭಾರ ಮಾಡುವರು.

ಬ್ರಹ್ಮನ 360 ದಿನ = ಬ್ರಹ್ಮನ 1 ವರ್ಷ = 15552000000.00 (ಮನುಷ್ಯಮಾನ)

ಬ್ರಹ್ಮದೇವರ 100 ವರ್ಷ = ಬ್ರಹ್ಮರ ಪೂರ್ಣಾಯುಷ್ಯ = 15552000000000 ವರ್ಷ
= ಬ್ರಹ್ಮಕಲ್ಪ (ಮನುಷ್ಯಮಾನದಂತೆ)

# ಕಾಲಮಾನ

ಮನುಷ್ಯನ ಒಂದು ದಿನದ ಉಸಿರಾಟ = 15 x 60 x 24 = 21,600

1 ವಿಘಳಿಗೆ = 24 ಸೆಕೆಂಡ್ (6 ಸಲ ಉಸಿರಾಟದ ಕಾಲ)

1 ನಿಮಿಷ = 24 ವಿಘಳಿಗೆ

1 ಘಳಿಗೆ = 60 ಪಳ (24 ನಿಮಿಷ)

60 ನಿಮಿಷ (1 ಘಂಟೆ) = $2^1/_2$ ಘಳಿಗೆ

60 ಘಳಿಗೆ = 1 ದಿನ (24 ಗಂಟೆ)

15 ದಿನ = 1 ಪಕ್ಷ

2 ಪಕ್ಷ = 1 ಮಾಸ

12 ಮಾಸ = 1 ವರ್ಷ, 350 ವರ್ಷ = 1 ದಿವ್ಯ ವರ್ಷ

# ಯುಗಮಾನ

| ದಿವ್ಯವರ್ಷ | ಯುಗ | ಮಾನುಷವರ್ಷ |
|---|---|---|
| 4800 | ಕೃತಯುಗ | 17,28,000 (4 ಕಲಿಯುಗ) |
| 3600 | ತ್ರೇತಾಯುಗ | 12,96,000 (3 ಕಲಿಯುಗ) |
| 2400 | ದ್ವಾಪರಯುಗ | 8,64,000 (2 ಕಲಿಯುಗ) |
| 1200 | ಕಲಿಯುಗ | 4,32,000 |
| 12,000 | ಮಹಾಯುಗ | 43,20,000 (10 ಕಲಿಯುಗ=1ಮಹಾಯುಗ) |

71 ಮಹಾಯುಗ = 1 ಮನುಕಾಲ = 1 ಮನ್ವಂತರ

15 ಮನುಸಂಧಿ + 14 ಮನುಕಾಲ = 1 ಕಲ್ಪ

(6 ಮಹಾಯುಗ + 994 ಮಹಾಯುಗ = 1000 ಮಹಾಯುಗ = 1 ಕಲ್ಪ)

2 ಕಲ್ಪ (ಅಹೋರಾತ್ರಿ) = ಚತುರ್ಮುಖ ಬ್ರಹ್ಮರ ಒಂದು ದಿನ

ಬ್ರಹ್ಮರ 100 ವರ್ಷ (2 ಕಲ್ಪ x 360 ದಿನ x 100 ವರ್ಷ) = ಬ್ರಹ್ಮರ ಆಯುಷ್ಯ.

ಬ್ರಹ್ಮರ ಒಂದು ಹಗಲಲ್ಲಿ 14 ಇಂದ್ರರು, 14 ಮನುಗಳು ರಾಜ್ಯವಾಳುವರು.

# ಮಹಾಪರ್ವಕಾಲಗಳು

1. **ಕಪಿಲ ಷಷ್ಠಿ:** ಭಾದ್ರಪದ ಕೃಷ್ಣ ಷಷ್ಠೀತಿಥಿಯು ಮಂಗಳವಾರ ಅಥವಾ ಭಾನುವಾರವಾಗಿದ್ದು ವ್ಯತೀಪಾತಯೋಗವಿದ್ದು ರೋಹಿಣೀ ನಕ್ಷತ್ರ ಕೂಡಿದ್ದರೆ. (ಫಲ–ಕೋಟಿಸೂರ್ಯಗ್ರಹಣ ಗಳಿಗೆ ಸಮಾನ)
2. **ಚಂದ್ರ ಷಷ್ಠಿ:** ಕಪಿಲ ಷಷ್ಠಿ ಚಂದ್ರೋದಯದ ಕಾಲಕ್ಕೆ ಬಂದಿದ್ದರೆ.
3. **ದ್ವಾದಶೀ ತಿಥಿ** (ಯಾವ ಮಾಸದ್ದಾದರೂ)ಹಸ್ತ ನಕ್ಷತ್ರ ಅಥವಾ ವ್ಯತೀಪಾತಯೋಗಗಳಿಂದ ಕೂಡಿದ್ದಾರೆ ಅದು ಕಪಿಲಷಷ್ಠಿಗೆ ಸಮಾನ ಪರ್ವಕಾಲ.
4. **ಚೂಡಾಮಣಿಯೋಗ:** ಎರಡು ಅಥವಾ ಮೂರು ಪರ್ವಕಾಲಗಳು ಒಟ್ಟಿಗೆ ಬಂದಿದ್ದಾರೆ.
5. **ಪದ್ಮಕಯೋಗ:** ಅಮಾವಾಸ್ಯೆ ಸೋಮವಾರ, ಮಂಗಳವಾರ, ಗುರುವಾರ ಅಥವಾ ಭಾನುವಾರ ಬಂದಿದ್ದಾರೆ. (ಫಲ: ನೂರು ಸೂರ್ಯಗ್ರಹಣಗಳಿಗೆ ಸಮಾನ)
6. **ಪುಷ್ಯಾರ್ಕಯೋಗ:** ಭಾನುವಾರ ಪುಷ್ಯಾನಕ್ಷತ್ರ ಬಂದಿದ್ದಾರೆ.
7. **ಅರ್ಧೋದಯಯೋಗ:** ಪುಷ್ಯ ಅಥವಾ ಮಾಘಮಾಸಗಳ ಅಮಾವಾಸ್ಯೆಯು ಭಾನುವಾರ ಬಂದು ವ್ಯತೀಪಾತಯೋಗ ಮತ್ತು ಶ್ರವಣ ನಕ್ಷತ್ರದಿಂದ ಕೂಡಿದ್ದಾರೆ. (ಫಲ: ಒಂದು ಕೋಟಿ ಗ್ರಹಣಗಳಿಗೆ ಸಮಾನ)
8. **ಮಹೋದಯ ಯೋಗ:** ಅರ್ಧೋದಯಯೋಗದಲ್ಲಿ ಒಂದು ಕಡಿಮೆಯಾಗಿದ್ದಲ್ಲಿ.
9. ಸ್ವಯಂ ಸಿದ್ಧ $3^1/_2$ ಮೂಹೂರ್ತಗಳು:

ಯುಗಾದಿ — ಚೈತ್ರಶುಕ್ಲ ಪಾಡ್ಯ
ಅಕ್ಷಯ ತೃತೀಯಾ — ವೈಶಾಖಶುಕ್ಲ ತ್ರಿತೀಯಾ
ವಿಜಯಾದಶಮೀ — ಆಶ್ವೀಜ ಶುಕ್ಲ ದಶಮೀ
ಬಲಿಪಾಡ್ಯ (ಅರ್ಧಮುಹೂರ್ತ) — ಕಾರ್ತೀಕ ಶುಕ್ಲ ಪಾಡ್ಯ.

10. 1. **ಪೂರ್ವೇದ್ಯ ಶ್ರಾದ್ಧ** 2. **ಅಷ್ಟಕಗಳು** 3. **ಅನ್ವಷ್ಟಕ**
    4. ಕೃಷ್ಣಪಕ್ಷದ ಭಾದ್ರಪದ, ಮಾರ್ಗಶಿರ, ಪುಷ್ಯ, ಮಾಘ ಹಾಗೂ ಫಾಲ್ಗುಣ ಮಾಸಗಳ ಸಪ್ತಮಿ, ಅಷ್ಟಮೀ, ನವಮೀ ದಿನಗಳು.
11.

| ವಾರಗಳು | ಅಮೃತಸಿದ್ಧಿಯೋಗ | ಮೃತ್ಯುಯೋಗ |
|---|---|---|
| ಭಾನುವಾರ | ಹಸ್ತಾನಕ್ಷತ್ರ | ಅನುರಾಧಾನಕ್ಷತ್ರ |
| ಸೋಮವಾರ | ಶ್ರವಣಾನಕ್ಷತ್ರ | ಉತ್ತರಾಷಾಢಾನಕ್ಷತ್ರ |
| ಮಂಗಳವಾರ | ಅಶ್ವಿನೀನಕ್ಷತ್ರ | ಶತಭಿಷಾನಕ್ಷತ್ರ |
| ಬುಧವಾರ | ಅನುರಾಧಾನಕ್ಷತ್ರ | ಅಶ್ವಿನೀನಕ್ಷತ್ರ |
| ಗುರುವಾರ | ಪುಷ್ಯನಕ್ಷತ್ರ | ಮೃಗಶಿರಾನಕ್ಷತ್ರ |
| ಶುಕ್ರವಾರ | ರೇವತಿನಕ್ಷತ್ರ | ಅಶ್ಲೇಷಾನಕ್ಷತ್ರ |
| ಶನಿವಾರ | ರೋಹಿಣೀನಕ್ಷತ್ರ | ಹಸ್ತಾನಕ್ಷತ್ರ |

# ನವರತ್ನಗಳ ವಿಶೇಷ ಮಾಹಿತಿ

1. ನವರತ್ನಗಳು ಅನಾದಿಕಾಲದಿಂದಲೂ ಪುರಾಣಪ್ರಸಿದ್ಧವಾದವುಗಳು.
2. ಶ್ರೀಹರಿಯಿಂದಾರಂಭಿಸಿ ಎಲ್ಲ ದೇವತೆಗಳಿಂದ ಆಭರಣಗಳಲ್ಲಿ ಧಾರ್ಯಮಾಣವಾದವು ಈ ನವರತ್ನಗಳು.
3. ರತ್ನಗಳನ್ನು ಧರಿಸುವುದು ಶುಭ ಫಲ, ಅಶುಭ ನಿವಾರಣೆಗೆ ಹಾಗೂ ಅಲಂಕಾರಕ್ಕಾಗಿ.
4. ರತ್ನಗಳಿಂದ ಹೊರಹೊಮ್ಮುವ ಕಿರಣಗಳಿಂದಾಗಿ ಶರೀರ ಹಾಗೂ ಮನಸ್ಸಿನ ಮೇಲೆ ಪರಿಣಾಮವಾಗುವುದು.
5. ನವರತ್ನಗಳು ನವಗ್ರಹಗಳ ಪ್ರಭಾವಕ್ಕೆ ಒಳಗಾಗಿರುತ್ತವೆ.
6. ರತ್ನಗಳು ಗ್ರಹಗಳ ಗುರುತ್ವಾಶಕ್ತಿಯನ್ನು ಹೀರಿ ಫಲಾಫಲಗಳನ್ನು ಕೊಡುತ್ತವೆ.
7. ರತ್ನಗಳ ಧಾರಣೆ ದೈವಪ್ರಸಾದ, ಸೌಂದರ್ಯ, ಆರೋಗ್ಯ ಹಾಗೂ ಲಾಭಕ್ಕಾಗಿ.
8. ಒಟ್ಟು ಜಗತ್ತಿನಲ್ಲಿ 86 ರತ್ನಗಳು ಪ್ರಮುಖವೆಂದು ಗುರುತಿಸಲಾಗಿದೆ.
9. **ರತ್ನಗಳ ಜನ್ಯ** - (1) ಪ್ರಾಣಿಜನ್ಯ ರತ್ನ (2) ವನಸ್ಪತಿಜನ್ಯ ರತ್ನ (3) ಖನಿಜಜನ್ಯ ರತ್ನ
10. **ರತ್ನಗಳ ಪ್ರಧಾನ ಗುಣಧರ್ಮಗಳು**

    (1) ರೂಪ (ಸೌಂದರ್ಯ) (2) ಬಾಳಿಕೆ (3) ಲಭ್ಯ (4) ಪ್ರಭಾವ

    (1) ಬಣ್ಣ (2) ಕಠೋರತೆ (3) ಹೊಳಪು (4) ಪಾರದರ್ಶಕತ್ವ

    (1) ಉಷ್ಣ ವಿದ್ಯುತ್ (2) ಒತ್ತಡದ ವಿದ್ಯುತ್ (3) ಘರ್ಷಣೆಯ ವಿದ್ಯುತ್.
11. ಒಂದೊಂದು ರತ್ನವೂ ಒಂದೊಂದು ಗ್ರಹಗಳಿಂದ ಅಭಿಮನ್ಯವಾದವುಗಳಾಗಿರುತ್ತವೆ. ಈ ರತ್ನಗಳಿಗೆ ಪ್ರಾಣಪ್ರತಿಷ್ಠಾ ಮಾಡಿಸಿ ಧರಿಸಿದರೆ ಅವುಗಳ ಪ್ರಭಾವ ಹೆಚ್ಚುತ್ತದೆ.
12. ನವರತ್ನ (ನವಗ್ರಹ) ಉಂಗುರದಲ್ಲಿ ಎಲ್ಲ ರತ್ನಗಳನ್ನು ನಿಶ್ಚಿತ ದಿಕ್ಕಿನಲ್ಲಿ ಕೂಡಿಸಿರಬೇಕು. ಎಲ್ಲವೂ ಒಂದೇ ತೂಕದ್ದಾಗಿರಬೇಕು. ವಜ್ರದ ಹೊರತು ಇತರ ರತ್ನಗಳು ದೇಹದ ಚರ್ಮಕ್ಕೆ ಸ್ಪರ್ಶಿಸುವಂತಿರಬೇಕು.
13. ಬೆರಳಿಗೆ ಧರಿಸುವ ಉಂಗುರವು ಚೌಕಾಕಾರ ಅಥವಾ ಗೋಲಾಕಾರದ್ದಾಗಿರಬೇಕು. (ರತ್ನಗಳ ಸ್ಥಾನ ಕೆಳಗಿನಂತಿರಬೇಕು)

| | | |
|---|---|---|
| ಪಚ್ಚೆ | ವಜ್ರ | ಮುತ್ತು |
| ಪದ್ಮರಾಗ | ಮಾಣಿಕ್ಯ | ಹವಳ |
| ವೈಢೂರ್ಯ | ನೀಲ | ಗೋಮೇದಿಕ |

14. ರತ್ನಧಾರಣೆಯನ್ನು ವಿಧಿವತ್ತಾಗಿ ಪೂಜಿಸಿ ಸಂಕಲ್ಪಾದಿಗಳನ್ನು ಮಾಡಿ ಜಪಿಸಿ ಭಗವಂತನಿಗೆ ಅರ್ಪಿಸಿ ಧಾರಣ ಮಾಡಬೇಕು.
15. ಗ್ರಹಗಳ ಬಲಾಬಲ ರಾಶಿಕುಂಡಲಿಯಂತೆ, ತಜ್ಞರನ್ನು ವಿಚಾರಿಸಿ ರತ್ನಗಳನ್ನು ಧರಿಸಬೇಕು.
16. ಗ್ರಹಗಳ ಅನುಸಾರವಾಗಿ ಉಪರತ್ನಗಳನ್ನೂ ಧರಿಸಬಹುದು.

# ನವರತ್ನಗಳ ವಿಶೇಷ ಮಾಹಿತಿ

| | ರತ್ನ | ಬಣ್ಣ (ವರ್ಣ) | ಗುಣ | ಗ್ರಹಗಳು | ಜನ್ಯ | ಮಿತ್ರ ರತ್ನ | ಉಪರತ್ನ |
|---|---|---|---|---|---|---|---|
| 1 | ವಜ್ರ | ಶ್ವೇತ (ಶ್ರೇಷ್ಠ) ಗುಲಾಬಿ ಹಳದಿ ಕಪ್ಪು | ದುಬಾರಿ, ಖಠಿಣ ಹೊಳಪು, ವಿಷ | ಶುಕ್ರ | ಖನಿಜ | ಪಚ್ಚೆ ನೀಲ ಗೋಮೇದಿಕ | ಕುರಂಗಿ, ಕೈಂಸಲಾ ದತಲಾ, ಸಿಮ್ಮಾ, ತರ್ಕು |
| 2 | ಮಾಣಿಕ್ಯ | ಕೆಂಪು (ಸೂರ್ಯರತ್ನ) ಗುಲಾಬಿ, ಹಳದಿ, ಕಪ್ಪು ರಕ್ತ, ಆಕಾಶನೀಲಿ | ದುಬಾರಿ, ಕೋಮಲ, ಹೊಳಪು | ಸೂರ್ಯ | ಖನಿಜ | ಮುತ್ತು ಹವಳ ಪದ್ಮರಾಗ | ಲಾವಡಿ |
| 3. | ನೀಲ | ನೇರಳೆ, ನೀಲಿ, ಶ್ವೇತ | ಸೂಕ್ಷ್ಮ | ಶನಿ | ಖನಿಜ | ಪಚ್ಚೆ ವಜ್ರ ಗೋಮೇದಿಕ | ಜಾಮೂನಿಯಾ ಲೀಲಿಯಾ |
| 4. | ಹವಳ | ಕೆಂಪು (ಕುಂಕುಮ) ಹಳದಿ | ಮೃದು | ಮಂಗಳ | ಖನಿಜ | ಮಾಣಿಕ್ಯ, ಮುತ್ತು | ವಿದ್ರುಮ ಮಣಿ |
| 5. | ಪಚ್ಚೆ (ಮರಕತ) | ಹಸಿರು, ಶ್ವೇತ, ನೆಳಲು, ಗಿಳಿಹಸಿರು | ದುಬಾರಿ ಹಗರು ಕೋಮಲ, ಸವೆಯುತ್ತದೆ | ಬುಧ | ಖನಿಜ | ವಜ್ರ, ನೀಲ ಗೋಮೇದಿಕ | ಸಂಗಪಚ್ಚೆ ಮರಗಜ-ಪಚ್ಚೆ ಪೀತಪಚ್ಚೆ |
| 6. | ಮುತ್ತು | ಬಿಳಿ, ಶ್ವೇತ, ನೀಲಿ, ಕಪ್ಪು ಕೇಸರಿ | ದುಂಡು, ಪ್ರಾಣಿ ಮುತ್ತು | ಚಂದ್ರ | ಪ್ರಾಣಿ | ಮಾಣಿಕ್ಯ, ಹವಳ ಪದ್ಮರಾಗ | ಚಂದ್ರಮಣಿ |
| 7. | ಪದ್ಮರಾಗ (ಪುಷ್ಯರಾಗ) | ಹಳದಿ, ಶ್ವೇತ, ನೀಲಿ ಕಪ್ಪು, ಕೇಸರಿ | ಹೊಳಪು, ಕಠಿಣ, ಭಾರ ಅನೇಕ ಹೂ ಬಣ್ಣಗಳು | ಗುರು | ಖನಿಜ | ಮಾಣಿಕ್ಯ, ಮುತ್ತು ಹವಳ, ವೈಢೂರ್ಯ | ಸೋನೇಲಾ, ಫೀಮಾ ಕೇರೂ, ಸೋನಲ್ ಕೇಸರಿ |
| 8. | ಗೋಮೇದಿಕ | ತಿಳಿಕಂದು (ಹೊಗೆಬಣ್ಣ) ಗೋಮೂತ್ರ ಬಣ್ಣ | ಹೊಳಪು, ತುಸುಭಾರ ಕೋಮಲ | ರಾಹು | ಖನಿಜ | ಪಚ್ಚೆ ವಜ್ರ, ನೀಲ | ತುರಸಾ, ಸಾಫಿ |
| 9. | ವೈಢೂರ್ಯ | ಕಾಚಿನಬಣ್ಣ ಹಳದಿ, ನೀಲಿ, ಕೆಂಪು | ಹೊಳಪು, ಕಠಿಣ (Cat Eye) ಕೋಮಲ, ಹಗುರು | ಕೇತು | ಖನಿಜ | ಪದ್ಮರಾಗ | ಸಫೀಯಾ, ಗೋದಂತ |

|  | ರತ್ನ | ಸಮಾನ ಗಿಡದ ಬೇರು | ಜನ್ಮರಾಶಿ | ಜನ್ಮ ದಿನಾಂಕ | ಉಂಗುರಕ್ಕೆ ಲೋಹ | ದಾರಣದ ದಿನ | ರೋಗ ನಿವಾರಣೆ |
|---|---|---|---|---|---|---|---|
| 1 | ವಜ್ರ | ಖರಪೋಂಖಾದ್ದು | ವೃಷಭ, ತುಲಾ | 6, 15, 24 | ಬಿಳಿಬಂಗಾರ | ಶುಕ್ರವಾರ | ವೀರ್ಯ, ಕ್ಷೀಣತೆ, ಕೊರಳು ಲೈಂಗಿಕ, ಭೌತಿಕ ಮುಂ. |
| 2 | ಮಾಣಿಕ್ಯ | ಬಿಲ್ವಪತ್ರ ಗಿಡದ್ದು | ಸಿಂಹ | 1, 10, 19, 28 | ಬಂಗಾರ, ತಾಮ್ರ | ಭಾನುವಾರ | ನೇತ್ರ, ಕುರುಡು, ಹೃದಯ, ರಕ್ತ ದೊತ್ತಡ, ಮೂಳೆ ಮುಂ. |
| 3. | ನೀಲ | ಬಿಮ್ಬಾ ಅಥವಾ ವಿಧವೇದ್ದು | ಮಕರ ಕುಂಭ | 8, 17, 26 | ಕಬ್ಬಿಣ ಸೀಸ ಬೆಳ್ಳಿ | ಶನಿವಾರ | ಯೋನಿ, ಲಿಂಗ, ವಾಯುಮೂರ್ಛೆ ಮಾನಸಿಕ, ವಿಷಕ್ಕೆ ಮುಂ. |
| 4. | ಹವಳ | ಅನಂಗಮೂಲದ್ದು | ಮೇಷ, ವೃಶ್ಚಿಕ | 9, 18, 27 | ತಾಮ್ರ, ಬಂಗಾರ | ಮಂಗಳವಾರ | ರಕ್ತಸಂಬಂಧಿ, ಮೂತ್ರ, ಕಾಮಾಲೆ ಮಜ್ಜ ಮುಂ. |
| 5. | ಪಚ್ಚ (ಮರಕತ) | ವಿಧಾರದ್ದು | ಮಿಥುನ, ಕನ್ಯಾ | 5, 14, 23 | ಕಂಚು, ಬಂಗಾರ ಪ್ಲಾಟಿನಮ್ | ಬುಧವಾರ | ಕಂಠ, ತೊದಲು, ಶ್ವಾಸ, ಆಸ್ಥಮಾ ಕರಳು, ಚರ್ಮ, ಗಡ್ಡೆ ಮುಂ. |
| 6. | ಮುತ್ತು | ಖರನಿಯದ್ದು | ಕರ್ಕ | 2, 11, 20, 29 | ಬೆಳ್ಳಿ | ಸೋಮವಾರ (ಪುಷ್ಯಾನಕ್ಷತ್ರ) | ರಕ್ತಹೀನತೆ, ದುರ್ಬಲ, ಶ್ವಾಸ, ದೃಷ್ಟಿದೋಷ, ಉನ್ಮಾದ, ಮಾನಸಿಕ, ತಲೆನೋವು ಮುಂ. |
| 7. | ಪದ್ಮರಾಗ (ಪುಷ್ಯರಾಗ) | ಸಂತರಾ, ದಾಳಿಂಬೆ ಬಾಳೆ | ಮೀನ | 3, 12, 21, 30 | ಬಂಗಾರ | ಗುರುವಾರ | ಯಕೃತ್, ಕೊಬ್ಬು ಕಾಲು, ಸೊಂಟ ಸ್ತನ ಮುಂ. |
| 8. | ಗೋಮೇದಿಕ | ಚಂದನದ್ದು | – | 4, 13, 22, 31 | ಪಂಚಲೋಹ ಬೆಳ್ಳಿ | ಬುಧವಾರ | ದಥಾರ, ವಾಯು, ಮಬ್ಬು, ಮೂಲವ್ಯಾಧಿ, ಉಷ್ಣ ಸಿಡುವು, ಭೇದಿ, ಜ್ವರ ಮುಂ |
| 9. | ವೈಢೂರ್ಯ | ಅಶ್ವಗಂಧದ್ದು ಗೋದಂತ | – | 7, 16, 26 | ಪಂಚಲೋಹ, ಬಂಗಾರ | ಗುರುವಾರ | ರಕ್ತಭೇದಿ, ನಪುಂಸಕ, ತೊನ್ನು ಅಜೀರ್ಣ, ಮಧುಮೇಹ, ಮುಂ. |

17. ಅಶುಚಿ ಸ್ಥಳಗಳಿಗೆ ಹೋದಾಗ, ಸ್ಮಶಾನಾದಿಗಳಿಗೆ ಹೋದಾಗ, ಮೈಲಿಗೆ ಇದ್ದಾಗ, ಸ್ತ್ರೀಯರು ಪ್ರಸವ, ರಜಸ್ವಲೆ ಸಂದರ್ಭಗಳಲ್ಲಿ ರತ್ನಗಳನ್ನು ಧರಿಸದೆ ತೆಗೆದಿಟ್ಟಿರಬೇಕು.
18. ರತ್ನಗಳನ್ನು ಆಯು, ಆರೋಗ್ಯ, ಧನಲಾಭ, ಮನಶ್ಶಾಂತಿ, ಸೌಂದರ್ಯ ಮೊದಲಾದವುಗಳ ಶುಭ ಫಲಕ್ಕಾಗಿ ಧರಿಸುವುದು.
19. ನವರತ್ನಗಳು ಬರೀ ಶರೀರ ಸೌಂದರ್ಯ ವರ್ಧಕವಲ್ಲ, ಅವು ಜೀವನವನ್ನು ಉನ್ನತಿಗೆ ಒಯ್ಯುವ ವಾಹಕಗಳು ಆಗಿವೆ.
20. ಸಾಮಾನ್ಯವಾಗಿ ಅನಾಮಿಕ ಬೆರಳಿಗೆ ಯಾವ ರತ್ನವನ್ನಾದರೂ ಧರಿಸಬಹುದು.
21. ಮುತ್ತಿನ ರತ್ನಹಾರ ಎಲ್ಲ ರತ್ನಗಳಿಗಿಂತಲೂ ಶ್ರೇಷ್ಠವಾದದ್ದು.
22. ದೋಷಯುಕ್ತ ರತ್ನಗಳನ್ನು ಎಂದಿಗೂ ಧರಿಸಬಾರದು. ಇವು ಹಾನಿಕಾರಕವಾದುವು.
23. ವೈಢೂರ್ಯ ನಾಲ್ಕು ವಿಧ : 1. ಶಿಶುಪಾಲ ವೈಢೂರ್ಯ (ಶ್ರೇಷ್ಠ) 2. ಕಾಚ ವೈಢೂರ್ಯ 3. ಗಿರಿಕಾಯ ವೈಢೂರ್ಯ 4. ಸ್ಫಟಿಕ ವೈಢೂರ್ಯ
24. ಯಾವ ರೋಗ ಯಾವ ಗ್ರಹದಿಂದಾದದ್ದೆಂದು ತಿಳಿದು ಅದರಂತೆ ರತ್ನಗಳನ್ನು ಧರಿಸಬೇಕು.
25. ಜಾತಕನ ಗ್ರಹಗಳ ದೆಶೆಗಳಿಗನುಸಾರ ರತ್ನಗಳನ್ನು ಧರಿಸುವುದು ಉತ್ತಮ.
26. ರತ್ನಗಳನ್ನು ಧರಿಸುವ ವ್ಯಕ್ತಿ ನಿಗದಿತ ದಿನದಂದು ಸ್ನಾನಾದಿಗಳನ್ನು ಮಾಡಿ ಶುದ್ಧ ವಸ್ತ್ರ ಧರಿಸಿ ದೇವರಿಗೆ ಸಮರ್ಪಿಸಿ, ಪೂರ್ವದಿಕ್ಕಿಗೆ ಕೂತು ಪೂಜಿಸಿದ ರತ್ನಗಳೊಂದಿಗೆ ಜಲಪುಷ್ಪ ಗರಿಕೆ ದರ್ಭೆ, ಕುಂಕುಮ ದಕ್ಷಿಣೆಗಳನ್ನು ಹಿಡಿದು ಸಂಕಲ್ಪ ಪೂರ್ವಕ ಧಾರಣ ಮಾಡಬೇಕು.
27. ರತ್ನಗಳ ಆಯು, ಆರೋಗ್ಯ, ಧನಲಾಭ, ಮನಶ್ಶಾಂತಿ, ಸೌಂದರ್ಯಕ್ಕಾಗಿ ಧರಿಸುವುದು.
28. ಜ್ಯೋತಿಷದಲ್ಲಿ ರತ್ನಗಳಿಗೆ ವಿಶೇಷವಾದ ಮಹತ್ವವಿದೆ.
29. ದೆಶೆಗಳಿಗೆ ಅನುಗುಣವಾಗಿ ಮತ್ತು ಮುಖ್ಯವಾಗಿ ಆರೋಗ್ಯಕ್ಕೆ ಜಾತಕನ ಲಗ್ನಾಧಿಪತಿಯ ರತ್ನವನ್ನು ಧರಿಸುವುದು ಶ್ರೇಷ್ಠವಾದುದು.
30. ಜಾತಕದಂತೆ, ಜನ್ಮರಾಶಿಗೆ ಸೂಕ್ತವಾದ ರತ್ನಗಳು ಹೀಗಿವೆ: ಮೇಷ – ಹವಳ, ವೃಷಭ–ವಜ್ರ, ಮಿಥುನ – ಪಚ್ಚೆ ಕರ್ಕ – ಮುತ್ತು ಸಿಂಹ – ಮಾಣಿಕ್ಯ, ಕನ್ಯಾ – ಪಚ್ಚೆ ತುಲಾ – ವಜ್ರ, ವೃಶ್ಚಿಕ–ಹವಳ, ಧನು–ಪದ್ಮರಾಗ, ಮಕರ – ನೀಲ, ಕುಂಭ – ನೀಲ, ಮೀನ – ಪದ್ಮರಾಗ.
31. ಜಾತಕವಿಲ್ಲದಿದ್ದಲ್ಲಿ ಅವರ ಜನ್ಮನಾಮದ ರಾಶಿಯಂತೆ ರತ್ನಗಳನ್ನು ಧರಿಸಬಹುದು. ಅಥವಾ ಸೂರ್ಯರಾಶಿ – ಚಂದ್ರರಾಶಿಗೆ ತಕ್ಕಂತೆ ರತ್ನಗಳನ್ನು ಧರಿಸಬಹುದು.
32. ನವರತ್ನಗಳಲ್ಲಿ ಮಿತ್ರತ್ವ ಶತೃತ್ವಗಳೆಂದಿವೆ. ಇದನ್ನು ತಿಳಿದು ಬಳಸಬೇಕು.
33. ನವರತ್ನಗಳು ಲಭ್ಯವಾಗದಿದ್ದಲ್ಲಿ ಉಪರತ್ನ ಅಥವಾ ಕಾಷ್ಠಮಣಿಗಳನ್ನು ಧರಿಸಬಹುದು.
34. ನವರತ್ನಗಳು ಬರಿ ಶರೀರ ಸೌಂದರ್ಯ ವರ್ಧಕವಲ್ಲ, ಅವು ಜೀವನವನ್ನು ಉನ್ನತಿಗೆ ಒಯ್ಯುವ ವಾಹಕಗಳು.

# ಇತರ ಕೆಲ ಮಾಹಿತಿಗಳು

## ಷೋಡಶ ದಾನಗಳು

| | | | |
|---|---|---|---|
| 1. ಗೋದಾನ | 2. ಭೂದಾನ | 3. ಹಿರಣ್ಯದಾನ | 4. ವಸ್ತ್ರದಾನ |
| 5. ಆಭರಣದಾನ | 6. ಛತ್ರದಾನ | 7. ಚಾಮರದಾನ | 8. ಶಯ್ಯಾದಾನ |
| 9. ವ್ಯಜನದಾನ | 10. ಸಾಲಿಗ್ರಾಮ ದಾನ | 11. ಧನದಾನ | 12. ದೀಪದಾನ |
| 13. ಧಾನ್ಯದಾನ | 14. ಪಾದುಕಾದಾನ | 15. ಆಜ್ಯದಾನ | 16. ಕನ್ಯಾದಾನ. |

## ಅರ್ಘ್ಯಾದಿ ಪಾತ್ರಪೂಜಾ

| ಪಾತ್ರ | ದಿಕ್ಕು | ದೇವತೆ | ತೋರುವ ಮುದ್ರೆ |
|---|---|---|---|
| ಅರ್ಘ್ಯ | ವಾಯುವ್ಯ | ಶ್ರೀ | ದಾನಮುದ್ರಾ |
| ಪಾದ್ಯ | ನೈರುತ್ಯ | ಸರಸ್ವತೀ | ಅಂಜಲಿಮುದ್ರೆ |
| ಆಚಮನೀಯ | ಈಶಾನ್ಯ | ರತೀ | ಗೋಕರ್ಣಮುದ್ರೆ |
| ಸ್ನಾನೀಯ | ಆಗ್ನೇಯ | ವರುಣ | ಹಂಸಮುದ್ರೆ |
| ಮಧುಪರ್ಕ | ಮಧ್ಯ | ಬ್ರಹ್ಮ | ಸೂಕರಮುದ್ರೆ |
| ಪುನರಾಚಮನ | ಮಧ್ಯ | ಶಾಂತಿ | ಹಂಸಮುದ್ರೆ |

## ಪಂಚಾಮೃತ ದ್ರವ್ಯ ದೇವತಾ

| | | |
|---|---|---|
| ಹಾಲು | ಮಧ್ಯ | ಗೋವಿಂದ – ಪದ್ಮಾ |
| ಮೊಸರು | ಪೂರ್ವ | ವಾಮನ – ವೃಷಾಕಪೀ |
| ಜೇನು | ಪಶ್ಚಿಮ | ಮಧುಸೂದನ – ಕಮಲಾಲಯಾ |
| ಆಜ್ಯ | ದಕ್ಷಿಣ | ವಿಷ್ಣು – ಪದ್ಮಿನೀ |
| ಸಕ್ಕರೆ | ಉತ್ತರ | ಅಚ್ಯುತ – ಸುಗಂಧೀ |

## ರುದ್ರದೇವರ ರೂಪ ಹಾಗೂ ಪರಿವಾರ

| | ನಾಮ | ಹೆಂಡತಿ | ಪುತ್ರ | ಸ್ಥಾನ |
|---|---|---|---|---|
| 1. | ಭವ | ಉಷೆ | ಶುಕ್ರ | ಜಲ |
| 2. | ಶರ್ವ | ಸುಕೇಶಿ | ಅಂಗಾರಕ | ಭೂಮಿ |
| 3. | ಈಶಾನ | ಶಿವೆ | ಹನೂಮಂತ | ವಾಯು |
| 4. | ಪಶುಪತಿ | ಸ್ವಾಹಾ | ಸ್ಕಂದ | ಅಗ್ನಿ |
| 5. | ಭೀಮ | ದಿಕ್ಕು | ಸ್ವರ್ಗ | ಆಕಾಶ |
| 6. | ಉಗ್ರ | ದೀಕ್ಷೆ | ಸಂತಾನ | ಬ್ರಾಹ್ಮಣ |
| 7. | ಮಹಾದೇವ | ರೋಹಿಣಿ | ಬುಧ | ಚಂದ್ರ |
| 8. | ರುದ್ರ | ಸುವರ್ಚತಿ | ಶನೈಶ್ಚರ | ಸೂರ್ಯ |

## ದ್ವಾದಶಾದಿತ್ಯರು - ಅಂತರ್ಯಾಮಿ

1. ವಿವಸ್ವಾನ್ ನಾಮಕ ಆದಿತ್ಯ - ತ್ರಿವಿಕ್ರಮ
2. ಆರ್ಯಮಾ - ವಾಸುದೇವ
3. ಪೂಷಾ - ಜಗದ್ಯೋನಿ
4. ತ್ವಷ್ಟ್ರ - ಅನಂತ
5. ಸವಿತೃ - ಶೇಷಶಾಯಿ
6. ಭಗ - ಸಂಕರ್ಷಣ
7. ಧಾತೃ - ಪ್ರದ್ಯುಮ್ನ
8. ಪರ್ಜನ್ಯ - ದೈತ್ಯಾರಿ
9. ವರುಣ - ವಿಶ್ವತೋಮುಖಿ
10. ಮಿತ್ರ - ಜನಾರ್ದನ
11. ಶಕ್ರ - ಧರಾವಾಸ
12. ಉರುಕ್ರಮ - ದಾಮೋದರ
13. ಪ್ರಜಾಪತಿ - ಅಘಾರ್ದನ
14. ವಷಟ್ಕಾರ - ಶ್ರೀಪತಿ

### ಒಂದು ಮನುವಿನ ಕಾಲದ ಇಂದ್ರರು : 14

(1) ಯಜ್ಞ, (2) ರೋಚನ, (3) ಸತ್ಯಜಿತ್, (4) ತ್ರಿಶಿಖ, (5) ವಿಭು, (6) ಮಂತ್ರಧ್ರುಮ, (7) ಪುರಂದರ*, (8) ಬಲಿ, (9) ಅದ್ಭುತ, (10) ಶಂಭು, (11) ವೈವೃತಿ, (12) ಋತುಧಾಮ, (13) ದಿವಸ್ಪತಿ, (14) ಶುಚಿ. *ಈಗ ರಾಜ್ಯಭಾರ ಮಾಡುತ್ತಿರುವ ಇಂದ್ರ

### ಏಕಾದಶ ರುದ್ರರು

| | ಹೆಸರು | ಪತ್ನಿ | ವಾಸಸ್ಥಾನ | ರುದ್ರನಾಮ | ಅಂತರ್ಯಾಮಿ |
|---|---|---|---|---|---|
| 1. | ಮನ್ಯು | ಧೀ | ಹೃದಯ | ರುದ್ರ | ರಾಮ |
| 2. | ಮನು | ಧೃತಿ | ಇಂದ್ರಿಯಗಳು | ರೈವತ | ಅಚ್ಯುತ |
| 3. | ಮಹಿನಸ | ರಸಲಾ | ಪ್ರಾಣವಾಯು | ಓಜ | ಪುರುಷೋತ್ತಮ |
| 4. | ಮಹಾನ್ | ನಿಯುತ | ಆಕಾಶ | ಅಜೈಕಪಾತ್ | ಗೋವಿಂದ |
| 5. | ಶಿವ | ಉಮಾ | ವಾಯು | ಮಹಾನ್ | ವಾಮನ |
| 6. | ಋತಧ್ವಜ | ಸರ್ಪ | ಅಗ್ನಿ | ಬಹುರೂಪ | ಶ್ರೀಶ |
| 7. | ಉಗ್ರರೇತ | ಇಲಾ | ನೀರು | ಭವ | ಶ್ರೀಕಂಠ |
| 8. | ಭವ | ಅಂಬಿಕಾ | ಭೂಮಿ | ವಾಮದೇವ | ವಿಶ್ವಸಾಕ್ಷಿ |
| 9. | ಕಾಲ | ಇರಾವತಿ | ಸೂರ್ಯ | ಉಗ್ರ | ನಾರಯಣ |
| 10. | ವಾಮದೇವ | ಸ್ವಧಾ | ಚಂದ್ರ | ವೃಷಾಕಪಿ | ಮಧುಪುರಿ |
| 11. | ಧೃತವೃತ | ದೀಕ್ಷಾ | ತಪಸ್ಸು | ಅಹಿರ್ಬುಧ್ನಿ | ಅನಿರುದ್ಧ |

ಇಲ್ಲಿ ಕೆಲವು ನಾಮಾಂತರಗಳೂ ಇರುತ್ತದೆ.

## ಜೀವನು ಜನ್ಮತಾಳುವ ಕ್ರಮ

| ಆಗಮನ ಸ್ಥಾನಗಳು | ರೂಪಗಳ ಧ್ಯಾನ | ಪ್ರಾಣದೇವರ ಐದು ರೂಪಗಳು |
|---|---|---|
| ದ್ಯು - ಆಕಾಶ | ವಾಸುದೇವ | ಪ್ರಾಣ - ಪೃಥ್ವೀ |
| ಪರ್ಜನ್ಯ - ಮಳೆ | ನಾರಾಯಣ | ಅಪಾನ - ಶ್ರೀದೇವಿ |
| ಧರಾ - ಭೂಮಿ | ಸಂಕರ್ಷಣ | ವ್ಯಾನ - ದ್ಯು |
| ಪುಂ - ಪುರುಷ | ಅನಿರುದ್ಧ | ಉದಾನ - ವಿದ್ಯುದ್ದೇವಿ |
| ಸ್ತ್ರೀ - ಸ್ತ್ರೀಗರ್ಭ | ಪ್ರದ್ಯುಮ್ನ | ಸಮಾನ - ರಿಗ್ದೇವಿ |

**ಶುಭ ಶಕುನಗಳು**

ಗೋ, ಬ್ರಾಹ್ಮಣ, ಕನ್ಯಾ, ಶಂಖ, ತುಳಸೀ, ಭೇರಿ, ಮೊಸರು, ಹಣ್ಣು ಅಗ್ನಿ, ಹೂವು, ಪಲ್ಲಕ್ಕಿ, ಮೇಳವಾದ್ಯ, ಜೋಡಿಬ್ರಾಹ್ಮಣರು, ಗಜ, ವೃಷಭ, ಪೂರ್ಣಕುಂಭ, ಸುರಾಕುಂಭ, ಗರ್ಭಿಣಿ, ಮೀನು, ಸಿದ್ಧಾನ್ನ, ಶವ, ವೇಶ್ಯೆ - ಇತ್ಯಾದಿಗಳು

**ಅಶುಭ ಶಕುನಗಳು**

ಕಪಿ, ವಿಧವೆ, ಮಜ್ಜಿಗೆ, ತೈಲಲಿಪ್ತಮನುಷ್ಯ, ನಗ್ನ ಸ್ತ್ರೀ, ಸೌದೆಯ ಹೊರೆ, ಕತ್ತೆ ಕೆಂಪು ಹೂ, ಬ್ರಹ್ಮಚಾರಿ, ಒಂಟಿ ಬ್ರಾಹ್ಮಣ, ಅಂಗವಿಕಲ - ಇತ್ಯಾದಿಗಳು

## ಮರುತ್ತುಗಳು - 49

| | | | | | |
|---|---|---|---|---|---|
| ಪ್ರಾಣ, | ಅಪಾನ, | ವ್ಯಾನ, | ಉದಾನ, | ಸಮಾನ, | ನಾಗ |
| ಕೃಕಲ, | ಕೂರ್ಮ, | ದೇವದತ್ತ | ಧನಂಜಯ, | ಪ್ರವಹ, | ವಿವಹ |
| ಶಂಮು, | ಸಂವಹ, | ಪರಾವಹ, | ಉರ್ೃಹ, | ಆವಹ, | ಶಂಕು |
| ಕಾಲ, | ಶ್ವಾಸ, | ಅನಿಲ, | ಅನಲ, | ಪ್ರತಿಭ, | ಕುಮುರ |
| ಕಾಂತ, | ಶುಚಿ, | ಶ್ವೇತ, | ಅಜಿತ, | ಗುರು, | ಸಂಜ್ಞ |
| ಸಂವರ್ತಕ್ಯ, | ಕೀಲ, | ಅದಿತಿ, | ಸೌಮ್ಯ, | ಕಪಿ, | ಜಡ |
| ಮಂಡೂಕ, | ಸಂತತ, | ಸಿದ್ಧ, | ಋತು, | ಕೃಷ್ಣ, | ಪಿಕ |
| ಶುಕ, | ಯತಿ, | ಭೀಮ, | ಹನು, | ಪಿಂಗ, | ಅಹಂಪ್ರಾಣ, ಕಂಪನ |

**ಶತಸ್ಥರು:**

| | | |
|---|---|---|
| ಮರುತರು | : | 49 |
| ಅಶ್ವಿನೀದೇವತೆಗಳು | : | 2 |
| ವಿಶ್ವೇದೇವತೆಗಳು | : | 10 |
| ರುದ್ರರು | : | 11 |
| ಆದಿತ್ಯರು | : | 12 |
| ಪಿತೃಗಳು | : | 3 |
| ಬೃಹಸ್ಪತಿ | : | 1 |
| ವಸುಗಳು | : | 8 |
| ಪ್ರಥನತಾಯು, ಭಾರತೀ, ಪೃಥ್ವಿ, ಋಭು | : | 4 |
| | | 100 |

**ಶೇಷಶತಸ್ಥರು**

| | | | |
|---|---|---|---|
| ಆದಿತ್ಯರು | : | 6 | (12ರಲ್ಲಿ) |
| ಮುರುತ್ತುಗಳು | : | 47 | (49 ರಲ್ಲಿ) |
| ವಸುಗಳು | : | 7 | (8ರಲ್ಲಿ) |
| ರುದ್ರರು | : | 10 | (11ರಲ್ಲಿ) |
| ವಿಶ್ವೇದೇವತೆಗಳು | : | 10 | |
| ಅಶ್ವಿನೀದೇವತೆಗಳು | : | 2 | |
| ಪಿತೃ, ಧರಣೀ, ಋಭು | : | 3 | |
| | | 85 | |

**ಷಣ್ಣವತೀಶ್ರಾದ್ಧಗಳು:**

| | | |
|---|---|---|
| ಮನ್ವಾದಿಗಳು | : | 14 |
| ಮಹಾಲಯಗಳು | : | 16 |
| ಯುಗಾದಿಗಳು | : | 4 |
| ಸಂಕ್ರಮಣಗಳು | : | 12 |
| ಯೋಗಗಳು(ವೈಧೃತಿ) | : | 13 |
| ಅಮಾವಾಸ್ಯ | : | 12 |
| ವ್ಯತೀಪಾತ | : | 13 |
| ತಿಸ್ರಾಷ್ಟಕಗಳು | : | 12 |
| | | 96 |

**ಕಲಶಸ್ಥ ಶತಮೂರ್ತಿಗಳು**

| | | |
|---|---|---|
| ಅಜಾದಿ ಮೂರ್ತಿಗಳು | : | 51 |
| ಕೇಶವಾದಿ ಮೂರ್ತಿಗಳು | : | 24 |
| ಆತ್ಮಾದಿ ಮೂರ್ತಿಗಳು | : | 4 |
| ವಾಸುದೇವಾದಿ ಮೂರ್ತಿಗಳು | : | 4 |
| ವಿಶ್ವಾದಿ ಮೂರ್ತಿಗಳು | : | 4 |
| ಮತ್ಸ್ಯಾದಿ ಮೂರ್ತಿಗಳು | : | 10 |
| ವೇದವ್ಯಾಸ, ದತ್ತಾತ್ತ್ರೇಯ, ಶಿಂಶುಮಾರ | : | 3 |
| | | 100 |



ಹರಿದಾಸ ಸಾಹಿತ್ಯ ವ್ಯಾಸಸಾಹಿತ್ಯದ ಭಾಷಾನುವಾದ. ಸೀಮಂತ ಸಾಹಿತ್ಯ-ಅಸೀಮ ಅರ್ಥಗರ್ಭಿತ. ಇದನ್ನು ಅರ್ಥಮಾಡಿಕೊಳ್ಳುವುದೂ ಅತೀ ಮುಖ್ಯ.

# ಹರಿದಾಸವಾಹಿನಿ

ಹರಿದಾಸಸಾಹಿತ್ಯಕ್ಕೆಂದು ಮೀಸಲಾದ ಮಾಸಪತ್ರಿಕೆ. ಹರಿದಾಸರ ಬದುಕು-ಬರಹಗಳ, ಸಂದೇಶಾಮೃತವನ್ನು ಪ್ರಸರಿಸುವ ಪತ್ರಿಕೆ. ನಿತ್ಯಬಾಳಿಗೆ, ಸಂಸ್ಕೃತಿ ಉಳಿವಿಗೆ, ಆಧ್ಯಾತ್ಮ ಚಿಂತನೆಗೆ ಅನುವಾಗುವ ಪತ್ರಿಕೆ ಇದಾಗಿದೆ.

## ಇಂದೇ ಚಂದಾದಾರರಾಗಿ ಹರಿದಾಸಾಮೃತವನ್ನು ಸವಿಯಿರಿ

ತ್ರೈವಾರ್ಷಿಕ : ರೂ 250/-

ದಶವಾರ್ಷಿಕ : ರೂ. 600/- ಇಪ್ಪತ್ತು ವರುಷ : ರೂ. 1000/-

ಪೋಷಕರು : ರೂ. 2000/- ಮಹಾಪೋಷಕರು : ರೂ. 5000/-

(ಪೋಷಕ/ಮಹಾಪೋಷಕರಿಗೆ ಕೆಲವು ಪ್ರೋತ್ಸಾಹಗಳಿರುತ್ತದೆ)

'ಹರಿದಾಸವಾಹಿನಿ' ಹೆಸರಿನಲ್ಲಿ ಡಿಡಿ/ಚೆಕ್(ಸ್ಥಳೀಯ)/ಎಂ.ಒ/ನಗದು ಸಂದಾಯಿಸಬಹುದು

**Haridasa Vahini - C/A, 1966201000222, Canara Bank, Kalidasa Layout Branch, Bangalore 560 050.**

ಸಂಪಾದಕರು : 36, ಈಶಾವಾಸ್ಯ, 11ನೇ ಅಡ್ಡರಸ್ತೆ, 17ನೇ ಮುಖ್ಯರಸ್ತೆ, ಮುನೇಶ್ವರಾಬ್ಲಾಕ್, ಬೆಂಗಳೂರು - 560 026. ಫೋನ್ : 080-26754221.

From : Editor/Publisher, Haridasavahini
36/1, Eshavasya, 11th Cross, 17th Main, Muneshwara Block,
Bangalore - 560 026. Phone: 080-26754221.

Design
Panchama creators
9008028387